# ತುರುವೇಕೆರೆ ತಾಲ್ಲೂಕಿನ ಕೆರೆಗಳು : ಸಾಂಸ್ಕೃತಿಕ ಅಧ್ಯಯನ

(ಎಂ.ಫಿಲ್. ಪದವಿಯ ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಕಿರುಪ್ರಬಂಧ)

ಸಂಶೋಧಕಿ

ಪದ್ಮ ಬಿ.ಎಸ್.

ಮಾರ್ಗದರ್ಶಕರು

ಡಾ. ಸಿ. ಮಹದೇವ

ಪ್ರಾಧ್ಯಾಪಕರು



ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಸಮಾಜವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೦೯-೧೦

# ತುರುವೇಕೆರೆ ತಾಲ್ಲೂಕಿನ ಕೆರೆಗಳು : ಸಾಂಸ್ಕೃತಿಕ ಅಧ್ಯಯನ

(ಎಂ.ಫಿಲ್. ಪದವಿಯ ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಕಿರುಪ್ರಬಂಧ)

ಸಂಶೋಧಕಿ

ಪದ್ಮ ಬಿ.ಎಸ್.

Reg NO : KUAH/00440

ಮಾರ್ಗದರ್ಶಕರು

ಡಾ. ಸಿ. ಮಹದೇವ

ಪ್ರಾಧ್ಯಾಪಕರು



ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬
೨೦೦೯-೧೦





# ಸಂಶೋಧಕರ ಪ್ರಮಾಣ ಪತ್ರ

ತುರುವೇಕೆರೆ ತಾಲ್ಲೂಕಿನ ಕೆರೆಗಳು : ಸಾಂಸ್ಕೃತಿಕ ಅಧ್ಯಯನ ಎಂಬ ನಿಬಂಧವನ್ನು ಪ್ರಾಧ್ಯಾಪಕರಾದ ಡಾ. ಸಿ. ಮಹದೇವ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್. ಪದವಿಗಾಗಿ ಸಮಾಜವಿಜ್ಞಾನಗಳ ನಿಕಾಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ: ವಿದ್ಯಾರಣ್ಯ

ದಿನಾಂಕ: 14.09.2010

padma B.S.
ಪದ್ಮ ಬಿ.ಎಸ್.
ಸಂಶೋಧಕಿ
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ
ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

# ಮಾರ್ಗದರ್ಶಕರ ಪ್ರಮಾಣ ಪತ್ರ

**ತುರುವೇಕೆರೆ ತಾಲ್ಲೂಕಿನ ಕೆರೆಗಳು : ಸಾಂಸ್ಕೃತಿಕ ಅಧ್ಯಯನ** ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ **ಪದ್ಮ ಬಿ.ಎಸ್.** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸಲಾಗಿದೆ.

ಸ್ಥಳ: ವಿದ್ಯಾರಣ್ಯ

ದಿನಾಂಕ: 14/9/10

14/9/10

**ಡಾ. ಸಿ. ಮಹದೇವ**

ಪ್ರಾಧ್ಯಾಪಕರು ಹಾಗೂ ಮಾರ್ಗದರ್ಶಕರು

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ

ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – ೫೮೩ ೨೭೬

# ಪರಿವಿಡಿ

## ಸಂಕ್ಷೇಪಗಳು

೧. E.C. – ಎಫಿಗ್ರಾಫಿಯ ಕರ್ನಾಟಿಕ

೨. E.I. – ಎಫಿಗ್ರಾಫಿಯ ಇಂಡಿಯಾ

೩. S.S.I. – ಸೌಥ್ ಇಂಡಿಯನ್ ಇನ್ಸ್ಕ್ರಿಪ್ಸ್‌ನ್

೪. M.A.R. – ಮೈಸೂರು ಆರ್ಕಿಯಲಾಜಿಕಲ್ ರಿಪೋರ್ಟ್ಸ್




ತುಮಕೂರು ಜಿಲ್ಲಾ ನಕ್ಷೆ

# ತುರುವೇಕೆರೆ ತಾಲೂಕು ನಕ್ಷೆ






## ಅಧ್ಯಾಯ ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

**ಪ್ರಸ್ತಾವನೆ:**

ಪ್ರಪಂಚದಲ್ಲಿರುವ ಕೋಟ್ಯಾಂತರ ಜೀವರಾಶಿಗಳು, ಪ್ರಾಣಿಗಳು ನೀರಿನಿಂದಲೇ ಉಗಮ ಹೊಂದಿವೆ. ಮಾನವನ ಉಗಮ ಮತ್ತು ವಿಕಾಸದಲ್ಲಿ ನೀರಿನ ಪಾತ್ರ ಪ್ರಮುಖವಾದುದಾಗಿದೆ. ಪ್ರಾಗಿತಿಹಾಸ ಕಾಲದ ಮಾನವ ಅಲೆಮಾರಿಯಾಗಿದ್ದ. ಆತನ ಎಲ್ಲಾ ಬಗೆಯ ಚಟುವಟಿಕೆಗಳ ಕಾರ್ಯಕ್ಷೇತ್ರವು ಸರೋವರ, ನದಿ, ಕೆರೆ, ತೊರೆಗಳ ಸಮೀಪದಲ್ಲಿಯೇ ಕೇಂದ್ರೀಕೃತವಾಗಿತ್ತು.[೧] ಆರಂಭಕಾಲದಲ್ಲಿ ಅಲೆಮಾರಿಯಾಗಿದ್ದ ಮಾನವ ಕ್ರಮೇಣ ಒಂದು ಕಡೆ ನೆಲೆ ನಿಲ್ಲಲು ಪ್ರಾರಂಭಿಸಿದನು. ತನ್ನ ಆಯುಧಗಳಲ್ಲಿ ಬಹಳಷ್ಟು ಸುಧಾರಣೆ ಮಾಡಿಕೊಂಡು, ಕೃಷಿ ಜೀವನವನ್ನು ಪ್ರಾರಂಭಿಸಿದನು.

ಅಂದಿನಿಂದಲೂ ನಮ್ಮದು ವ್ಯವಸಾಯ ಪ್ರಧಾನ ದೇಶವಾಗಿದ್ದು, ಪ್ರಜೆಗಳ ಕಲ್ಯಾಣವು ವ್ಯವಸಾಯ ಉತ್ಪನ್ನಗಳ ಮೇಲೆ ಆಧಾರಿತವಾಗಿದೆ. ಆ ಸಮೃದ್ಧವಾದ ವ್ಯವಸಾಯ ಉತ್ಪನ್ನಗಳಿಗಾಗಿ ದೇಶವು ಮಳೆಯನ್ನು ಅವಲಂಬಿಸಿದೆ. ಆದರೆ ಈ ವಿಶಾಲ ದೇಶದಲ್ಲಿ ಪ್ರತಿ ವರ್ಷವೂ ಮಳೆಯ ಏರುಪೇರಿನಿಂದ ಒಂದಿಲ್ಲೊಂದು ಭಾಗವು ಅನಾವೃಷ್ಟಿ ಮತ್ತು ಅತಿವೃಷ್ಟಿಗಳಿಗೆ ಬಲಿಯಾಗಿ ಅದರಿಂದ ವ್ಯವಸಾಯ ಉತ್ಪನ್ನಗಳು ಕುಂಠಿತಗೊಂಡು, ಪ್ರಜೆಗಳು ಸಂಕಷ್ಟಗಳಿಗೆ ಈಡಾಗುತ್ತಿದ್ದ ನಿದರ್ಶನಗಳು ವಿಫಲವಾಗಿ ತಿಳಿದುಬರುತ್ತವೆ. ಈ ಪ್ರದೇಶದಲ್ಲಿ ನೆರೆ ಮತ್ತು ಬರ ಎಂದಿನಿಂದಲೂ ಇರುವ ಸಮಸ್ಯೆಯಾಗಿದ್ದು, ಇತ್ತೀಚಿನ ವರ್ಷಗಳಲ್ಲಿ ಜನಸಂಖ್ಯೆ ಹೆಚ್ಚಳದಿಂದ ಹಾಗೂ ಅರಣ್ಯ ನಾಶದಿಂದ ಅವು ಇನ್ನೂ ತೀವ್ರವಾಗಿವೆ. ಈ ಸಮಸ್ಯೆಯ ತೀವ್ರತೆಯನ್ನು

ಕಡಿಮೆ ಮಾಡಲು ಇರುವ ಒಂದು ಮಾರ್ಗ ನೀರನ್ನು ಜಲಾಶಯಗಳಲ್ಲಿ ಸಂಗ್ರಹಿಸುವುದು. ಅಂತಹ ಕೃತಹ ಸಂಗ್ರಹಗಳೇ ಕೆರೆ, ಕಟ್ಟೆ, ಕುಂಟೆಗಳಾಗಿವೆ. ಇವು ಮಾನವನ ಅಗತ್ಯತೆಗಳನ್ನು ಪೂರೈಸುವ ಪ್ರಾಥಮಿಕ ಮೂಲಗಳಾಗಿವೆ.[೨]

ಕೆರೆಯಂ ಕಟ್ಟಿಸು ಬಾವಿಯಂ ಸವೆಸು ದೇವಾಗಾರಮಂ ಮಾಡಿಸ ।
ಜ್ಜೆಱೆಯೊಳ್ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗ್ಗಿಂಬುಕೆಯ್ ನಂಬಿದ ।
ರ್ಗ್ಗೆಱೆವೆಟ್ಟಾಗಿರು ಶಿಷ್ಟರಂ ಪೊರೆಯೆನುತ್ತಿಯೆಂತೆಲ್ಲವಂ ಪಿಂದೆ ತಾ ।
ಯೆಱೆದಳ್ವಾಲೆಱೆವಂದು ತೊಟ್ಟು ಕಿವಿಯೊಳ್ಂ ಲಕ್ಷ್ಮೀಧರಾಮಾತ್ಯನಾ ॥[೩]

ಈ ಮೇಲೆ ಉಲ್ಲೇಖಿಸಿದ ಪದ್ಯವನ್ನು ವಿಜಯನಗರದ ಪ್ರೌಢಪ್ರತಾಪದೇವರಾಯನ ಮಂತ್ರಿ ಲಕ್ಷ್ಮೀಧರನು ಕೂಸಾಗಿದ್ದಾಗ ಅವನ ತಾಯಿ ಹಾಡಿ ಹಾಲೆರೆಯುತ್ತಿದ್ದಳೆಂದು ಹಂಪೆಯ ಕಡಲೆಕಾಳು ಗಣೇಶನ ಗುಡಿಯ ಮುಂದಿನ ಅಗಸೆಯಲ್ಲಿರುವ ಶಾಸನವು ತಿಳಿಸುತ್ತದೆ. ಇದರಿಂದ ನಮಗೆ ಮುಖ್ಯವಾಗಿ ತಿಳಿದುಬರುವುದೇನೆಂದರೆ ಮಧ್ಯಕಾಲೀನ ಭಾರತದಲ್ಲಿ ನೀರಾವರಿ ವ್ಯವಸ್ಥೆ, ಕೆರೆಯನ್ನು ಕಟ್ಟಿಸುವುದು, ಬಾವಿಗಳನ್ನು ತೋಡಿಸುವುದು, ಅತಿ ಮುಖ್ಯವಾದ ಕೆಲಸವಾಗಿತ್ತೆಂಬುದು ಸ್ಪಷ್ಟವಾಗುತ್ತದೆ. ಈ ಕೆಲಸವನ್ನು ಮಾಡುವುದು ಸಾಮಾಜಿಕ ಹಾಗೂ ನೈತಿಕ ಜವಾಬ್ದಾರಿಯಾಗಿತ್ತೆಂದೂ ಸಹ ತಿಳಿಯಬಹುದು. ಭಾರತದಲ್ಲಿ ಪ್ರಾಗೈತಿಹಾಸಿಕ ಕಾಲದಿಂದಲೂ ಕೆರೆಗಳು ಕಂಡುಬರುತ್ತವೆಯಾದರೂ ಅವುಗಳ ಸಂಖ್ಯೆ ದಕ್ಷಿಣಭಾರತದಲ್ಲಿ ಹೆಚ್ಚಾಗಿದೆ. ಉತ್ತರ ಭಾರತವು ಹಿಮಾಲಯ ಪರ್ವತ ಶ್ರೇಣಿಯಿಂದ ಕೂಡಿದ್ದು, ಹಲವಾರು ನದಿಗಳ ಉಗಮ ಸ್ಥಾನವಾಗಿದೆ. ಇದರಿಂದ ವರ್ಷವಿಡೀ ನದಿಗಳು ತುಂಬಿ ಹರಿಯುವುದರಿಂದ ಅಲ್ಲಿ ನೀರಿನ ಸಂಗ್ರಹದ ಅವಶ್ಯಕತೆ ಕಂಡುಬರುವುದಿಲ್ಲ. ದಕ್ಷಿಣ ಭಾರತದಲ್ಲಿ ಒಣ ಪ್ರದೇಶವೇ ಹೆಚ್ಚಾಗಿದ್ದು, ನೀರಿನ ಸಂಗ್ರಹದ ಅವಶ್ಯಕತೆ ಹೆಚ್ಚಾಗಿರುವುದರಿಂದ ಇಲ್ಲಿ ಜಲಾಶಯಗಳು, ಕೆರೆಗಳು, ಕಟ್ಟೆಗಳು ಮತ್ತು ಬಾವಿಗಳು ಹೆಚ್ಚಾಗಿ ಕಂಡುಬರುತ್ತವೆ.

ಕರ್ನಾಟಕವು ಬಹುಪಾಲು ಬೆಟ್ಟಗಳಿಂದ ಮತ್ತು ಏರುತಗ್ಗುಗಳಿಂದ ಕೂಡಿದ ಸಂಪದ್ಭರಿತ ನಾಡಾಗಿದ್ದು, ಈ ನಾಡಿನಲ್ಲಿ ಹಲವಾರು ನದಿಗಳ ಸಂಗಮವಾಗಿರುವುದು ಕಂಡುಬಂದಿವೆ. ಪುರಾಣ ಕಥೆಗಳಲ್ಲಿ ಇವುಗಳದೇ ಸ್ಥಾನಮಾನಗಳು, ಇಂದಿಗೂ ಸಹ ಇಂತಹ ಆಧುನಿಕ ಯುಗದಲ್ಲಿ ತಮ್ಮ ತಮ್ಮ ಸಂಸ್ಕೃತಿಯ ಪ್ರತೀಕವಾಗಿ, ಗಂಗಾಸ್ನಾನ, ಕುಂಭಮೇಳ, ತಲಕಾವೇರಿ ಪೂಜೆ, ನದಿಗಳಲ್ಲಿ ಬಾಗಿನ ಅರ್ಪಣೆ ಮಾಡುವ ಇನ್ನೂ ಮುಂತಾದ ಧಾರ್ಮಿಕ ಆಚರಣೆಗಳು ನಡೆಯುತ್ತಿವೆ. ಅಲ್ಲದೆ ಕೃಷಿಗೆ ಹೆಚ್ಚಿನ ಪ್ರಾಧಾನ್ಯತೆಯನ್ನು ನೀಡಿದೆ. ಇದರಿಂದ ಕರ್ನಾಟಕ ರಾಜ್ಯಾದ್ಯಾಂತ ಕೃಷಿಗೆ ಅನುಕೂಲವಾಗುವಂತೆ ಸಾವಿರಾರು ಕೆರೆಗಳಿವೆ.

ಕರ್ನಾಟಕದ ಪೂರ್ವ ಭಾಗದ ಮೈದಾನ ಪ್ರದೇಶದಲ್ಲಿರುವ ಜಿಲ್ಲೆ ತುಮಕೂರು. ಹಳೇ ಮೈಸೂರು ಭಾಗದಲ್ಲಿ ಮೊದಲು ಇದ್ದ ಒಟ್ಟು ಎಂಟು ಜಿಲ್ಲೆಗಳಲ್ಲಿ ತುಮಕೂರು ಜಿಲ್ಲೆ ಕೂಡ ಒಂದು. ಕಲ್ಲು ಬಂಡೆಗಳಿಂದ ಕೂಡಿದ ಬೆಟ್ಟ ಗುಡ್ಡಗಳನ್ನು ಹೊಂದಿರುವ ಇದು ಸಾಧಾರಣ ಮಳೆ ಬೀಳುವ ಪ್ರದೇಶ ಕೆರೆ-ಕಟ್ಟೆ, ಕುಂಟೆ, ಬಾವಿ ಈ ಪ್ರದೇಶದ ಜೀವನಾಡಿಗಳು, ಇಲ್ಲಿನ ಕೃಷಿ ಇವುಗಳನ್ನೇ ಅವಲಂಬಿಸಿದೆ.

ಈ ಜಿಲ್ಲೆಯು ಹತ್ತು ತಾಲೂಕುಗಳನ್ನು ಒಳಗೊಂಡಿದೆ. ಅದರಲ್ಲಿ ತುರುವೇಕೆರೆ ತಾಲೂಕು ಕೂಡ ಒಂದಾಗಿದೆ. ಉತ್ತರದಲ್ಲಿ ಚಿಕ್ಕನಾಯಕನಹಳ್ಳಿ, ದಕ್ಷಿಣದಲ್ಲಿ ಮಂಡ್ಯ ಜಿಲ್ಲೆಗೆ ಸೇರಿದ ನಾಗಮಂಗಲ, ಪಶ್ಚಿಮದಲ್ಲಿ ತಿಪಟೂರು, ಪೂರ್ವದಲ್ಲಿ ಕುಣಿಗಲ್ ತಾಲೂಕುಗಳಿಂದ ಸುತ್ತುವರೆದಿದೆ. ಇಲ್ಲಿ ಅನೇಕ ರಾಜಮನೆತನಗಳು, ಮಂತ್ರಿ ಮಾಂಡಳೀಕರು ಮತ್ತು ಸಾಮಂತರು ಆಳ್ವಿಕೆ ನಡೆಸಿರುವುದು ಅಲ್ಲಿ ಕಂಡುಬರುತ್ತದೆ. ಇವುಗಳಿಗೆ ಆಧಾರವಾಗಿ ಕೆರೆಗಳು, ದೇವಾಲಯಗಳು, ಶಾಸನಗಳು ಮತ್ತು ವೀರಗಲ್ಲುಗಳು ಇಂದಿಗೂ ಲಭ್ಯವಿವೆ. ತುರುವೇಕೆರೆಯು ಫಲವತ್ತಾದ ಮಣ್ಣನ್ನು ಹೊಂದಿರುವುದರಿಂದ ಅನೇಕ ಬೆಳೆಗಳನ್ನು ಬೆಳೆಯಲಾಗುತ್ತದೆ. ಕಾವೇರಿಯ ಒಂದು ಉಪನದಿ ಶಿಂಷಾನದಿ ದೇವರಾಯದುರ್ಗದ ದಕ್ಷಿಣ ಭಾಗದಲ್ಲಿ ಹುಟ್ಟಿ ತುರುವೇಕೆರೆ ತಾಲೂಕಿನ ಪೂರ್ವ ಭಾಗದಲ್ಲಿ ೧೪ ಕಿ.ಮೀ. ಹರಿದು ಕುಣಿಗಲ್ ತಾಲೂಕನ್ನು ಸೇರುತ್ತದೆ.[೪] ನೀರಾವರಿ ಏರ್ಪಾಟಿನ ದೃಷ್ಟಿಯಿಂದ ಅಷ್ಟು ಅನುಕೂಲವಾಗಿಲ್ಲ. ಆದರೆ ಇಪ್ಪತ್ತನೆಯ ಶತಮಾನದ ಕೊನೆಯಲ್ಲಿ ಗೋರೂರು ಅಣೆಕಟ್ಟಿನಿಂದ ಹೇಮಾವತಿ ನದಿಯ ನೀರು ತಾಲೂಕಿಗೆ ಹರಿದು ಬಂದಿರುವುದು ಸಂತಸದ ಸಂಗತಿ. ಈ ಪರಿಸರದಲ್ಲಿ ಸಣ್ಣ ಹಾಗೂ ದೊಡ್ಡ ಕೆರೆಗಳು ಸಾಕಷ್ಟಿವೆ. ಇವುಗಳನ್ನೇ ಅವಲಂಬಿಸಿ ಆಹಾರ ಧಾನ್ಯಗಳು, ದ್ವಿದಳ ಧಾನ್ಯಗಳು ಮತ್ತು ತೋಟದ ಬೆಳೆಗಳಿರುತ್ತವೆ. ಒಟ್ಟಾರೆ ಈ ಪ್ರದೇಶವು ಐತಿಹಾಸಿಕ ಮತ್ತು ಸಾಂಸ್ಕೃತಿಕವಾಗಿ ಮಹತ್ವದ ಸ್ಥಾನವನ್ನು ಪಡೆದಿದೆ.

ಪ್ರಸ್ತುತ ತುರುವೇಕೆರೆ ತಾಲೂಕಿನ ಕೆರೆಗಳ ಸಾಂಸ್ಕೃತಿಕ ಅಧ್ಯಯನ ಎಂಬ ಸಂಪ್ರಬಂಧವನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

**ಅಧ್ಯಯನದ ಉದ್ದೇಶ:**

ಇತಿಹಾಸದಲ್ಲಿ ನಾವು ಅಧ್ಯಯನ ಮಾಡಬೇಕಾದರೆ ಹಲವಾರು ಆಧಾರಗಳು ಇತಿಹಾಸದ ಅಧ್ಯಯನಕ್ಕೆ ಸಹಾಯ ಮಾಡುತ್ತವೆ. ಅಂತೆಯೇ ಪ್ರಸ್ತುತ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಕೆರೆಗಳ ಇತಿಹಾಸದ ಅಧ್ಯಯನ ಹಾಗೂ ಕೆರೆಗಳ ಪ್ರಾಮುಖ್ಯತೆಯನ್ನು ತಿಳಿಯಲು ಹಲವಾರು ಶಾಸನಗಳು ಸಹಾಯಕವಾಗಿವೆ. ಈ ಶಾಸನಗಳ ಆಧಾರದ ಮೇಲೆ ಕೆರೆಗಳ ಕುರಿತಾದ ಹೊಸ

ಸಂಗತಿಗಳನ್ನು ಬೆಳಕಿಗೆ ತರುವ ಪ್ರಯತ್ನ ಈ ಅಧ್ಯಯನದಾಗಿದೆ. ತುರುವೇಕೆರೆ ಪರಿಸರದಲ್ಲಿ ಸಣ್ಣ ಮತ್ತು ದೊಡ್ಡ ಪ್ರಮಾಣದ ಕೆರೆಗಳು ಸಾಕಷ್ಟು ಇದ್ದು, ಅವು ಪರಿಣಾಮರಹಿತವಾಗಿವೆ. ಅವುಗಳ ಸಂರಕ್ಷಣೆ, ಸಾಂಪ್ರದಾಯಿಕ ವಿಧಾನಗಳು, ಶಿಥಿಲವಾಗಿರುವುದೇ ಇದಕ್ಕೆ ಕಾರಣ ಇತ್ತೀಚೆಗೆ ಸರ್ಕಾರಗಳು, ಹಳೇ ಕೆರೆಗಳ ಜೀರ್ಣೋದ್ಧಾರ ಮಾಡಲು ಯೋಜನೆಗಳನ್ನು ರೂಪಿಸಿದೆ. ಆದರೆ ಈ ಪ್ರಯತ್ನಗಳು ಸಾಕಷ್ಟು ಪರಿಣಾಮಕಾರಿಯಾಗಿ ಆಗುತ್ತಿಲ್ಲ. ಹಿಂದೆ ಕೆರೆ ನಿರ್ಮಾಣ, ಕೆರೆಗಳ ಮೇಲುಸ್ತುವಾರಿ ಗ್ರಾಮ ಸಮಿತಿಯ ಮೇಲ್ವಿಚಾರಣೆಯಾಗಿತ್ತು. ಆದ್ದರಿಂದ ಉಧ್ಯಮದಾರನಿಗೆ ಕೆರೆಯ ಆಯಕಟ್ಟಿನಲ್ಲಿ ಭೂಮಿ ಪ್ರತಿಫಲವಾಗಿ ಸಿಗುತ್ತಿತ್ತು. ಬೇಸಾಯಗಾರರಿಗೆ ತೃಪ್ತಿಕರವಾಗುವಂತೆ ಗ್ರಾಮ ಸಮುದಾಯ ತನ್ನ ಅಧಿಕಾರಿಗಳ ಮೂಲಕ ನೀರನ್ನು ಸಮರ್ಪಕವಾಗಿ ಹಂಚುತ್ತಿತ್ತು. ಈ ತಾಲೂಕಿನ ಕೆರೆ ನೀರಾವರಿ ವ್ಯವಸ್ಥೆ, ಅವುಗಳ ಸ್ಥಿತಿಗತಿ, ಕೆರೆಗಳ ರಚನೆ, ಜೀರ್ಣೋದ್ಧಾರ, ಕೆರೆ ನಿರ್ವಹಣೆ ಮುಂತಾದವುಗಳನ್ನು ಶಾಸನಾಧಾರಗಳಿಂದ ತಿಳಿಯುವುದು ಈ ಅಧ್ಯಯನದ ಉದ್ಧೇಶವಾಗಿದೆ.

ಹಿಂದೆ ಯಾವ ಉದ್ದೇಶದಿಂದ ಕೆರೆ ನಿರ್ಮಾಣ ಮಾಡಲಾಯಿತು. ಕೆರೆಗಳ ಪ್ರಾಮುಖ್ಯತೆ ಹಾಗೂ ಅದರ ಉಪಯೋಗವನ್ನು ತಿಳಿಯಲು ಈ ಅಧ್ಯಯನ ಸಹಕಾರಿಯಾಗಿದೆ. ಕೆರೆಗೆ ಸಂಬಂಧಿಸಿದ ಕೆಲವು ಮುಖ್ಯ ಭಾಗಗಳಾದ ಏರಿ ನಿರ್ಮಾಣ, ತೂಬುಗಳ ರಚನೆ, ಕಾಲುವೆಗಳು ಮತ್ತು ಕೋಡಿಗಳ ವ್ಯವಸ್ಥೆಯನ್ನು ತಿಳಿಯುವ ಒಂದು ಪ್ರಯತ್ನವಾಗಿದೆ. ಅಲ್ಲದೆ ಕೆರೆಗಳು ಯಾವ ರೀತಿ ಕೃಷಿ ನೀರಾವರಿಗೆ ಮತ್ತು ಧಾರ್ಮಿಕ ಹಾಗೂ ಸಾಂಸ್ಕೃತಿಕ ಆಚರಣೆಗಳಿಗೆ, ಮೀನುಗಾರಿಕೆಗೆ ಸಹಕಾರಿಯಾಗಿದೆ. ಹಾಗೆಯೇ ಕೆರೆಗಳ ನಿರ್ಮಾಣ ಮಾಡಿದ ನಂತರ ಅದರ ಉದ್ದೇಶ ಎಷ್ಟರ ಮಟ್ಟಿಗೆ ಯಶಸ್ವಿಯಾಗಿದೆ ಎಂಬುದನ್ನು ಈ ಅಧ್ಯಯನದಿಂದ ತಿಳಿಯಬಹುದು. ಈ ತಾಲೂಕಿನ ಹೆಚ್ಚಿನ ಗ್ರಾಮಗಳು ಕೆರೆ ಮತ್ತು ಸಂದ್ರ ಎಂಬ ಹೆಸರಿನಿಂದ ಕೂಡಿವೆ. ಉದಾ: ತುರುವೇಕೆರೆ, ಅಮ್ಮಸಂದ್ರ, ಮಾಯಸಂದ್ರ ಇತ್ಯಾದಿ.

### ಅಧ್ಯಯನದ ವ್ಯಾಪ್ತಿ:

ಯಾವುದೇ ಒಂದು ಅಧ್ಯಯನ ಮಾಡಬೇಕಾದರೆ ವ್ಯಾಪ್ತಿ ತುಂಬ ಮುಖ್ಯವಾದುದು. ಪ್ರಸ್ತುತ ಅಧ್ಯಯನದಲ್ಲಿ ತುರುವೇಕೆರೆ ತಾಲೂಕಿನ ಕೆರೆಗಳನ್ನು ಕುರಿತು ಅಧ್ಯಯನ ಕೈಗೊಳ್ಳಲಾಗಿದೆ. ಈ ಪರಿಸರದ ಭೌಗೋಳಿಕತೆಯು ಕೆರೆಗಳ ಅಧ್ಯಯನದಲ್ಲಿ ಎಷ್ಟರ ಮಟ್ಟಿಗೆ ಸಹಾಯಕವಾಗಿದೆ. ಎಂಬ ಹಿನ್ನೆಲೆಯಲ್ಲಿ ಇದರ ವ್ಯಾಪ್ತಿಯನ್ನು ನಿರ್ದಿಷ್ಟಪಡಿಸಲಾಗಿದೆ. ತುರುವೇಕೆರೆ ತಾಲೂಕು ಹಿಂದೆ ತಿಪಟೂರು ತಾಲೂಕಿನ ವ್ಯಾಪ್ತಿಯಲ್ಲಿತ್ತು. ನಂತರ ತುರುವೇಕೆರೆ ತಾಲೂಕಾಗಿ ರೂಪಗೊಂಡಿತು. ಈ ಪ್ರದೇಶವು ನೀರಾವರಿಗಾಗಿ ಬಹಳ ಹಿಂದಿನಿಂದಲೂ ಕೆರೆಗಳನ್ನು

ಅವಲಂಬಿಸಿತ್ತು. ಇದರ ವ್ಯಾಪ್ತಿಯಲ್ಲಿ ನೂರ ಹತ್ತೊಂಬತ್ತು ಕೆರೆಗಳು ಬರುತ್ತವೆ. ಅಧ್ಯಯನದ ದೃಷ್ಟಿಯಿಂದ ತುರುವೇಕೆರೆಯ ಹದಿನೆಂಟು ಪ್ರಮುಖ ಕೆರೆಗಳನ್ನು ಅಧ್ಯಯನಕ್ಕೆ ಸೀಮಿತಗೊಳಿಸಲಾಗಿದೆ.

ತುರುವೇಕೆರೆ ತಾಲೂಕಿನ ಕೆರೆಗಳು ಹೆಚ್ಚಾಗಿ ಹೊಯ್ಸಳರು, ವಿಜಯನಗರ ಮತ್ತು ಪಾಳೆಯಗಾರರ ಕಾಲಾವಧಿಯಲ್ಲಿ ನಿರ್ಮಾಣಗೊಂಡಿವೆ. ಹಾಗೂ ನಂತರದ ಕಾಲಾವಧಿಯಲ್ಲಿ ರಚನೆಗೊಂಡ ಕೆರೆಗಳು ಪ್ರಸ್ತುತ ಅಧ್ಯಯನದಲ್ಲಿ ಬರುತ್ತವೆ. ಈ ಅಧ್ಯಯನದ ವ್ಯಾಪ್ತಿ, ಕೇವಲ ಕೆರೆಗಳ ನಿರ್ಮಾಣ, ನಿರ್ವಹಣೆಗೆ ಮಾತ್ರ ಸೀಮಿತವಾಗಿರದೆ, ಕೃಷಿ, ನೀರಿನ ಬಳಕೆ, ಬೆಳೆಗಳು ಹಾಗೂ ಸಾಂಸ್ಕೃತಿಕ ಆಚರಣೆಗಳನ್ನು ತಿಳಿಯುವ ಪ್ರಯತ್ನ ಮಾಡಲಾಗಿದೆ.

**ಇದುವರೆಗಿನ ಅಧ್ಯಯನಗಳ ಸಮೀಕ್ಷೆ:**

ತುರುವೇಕೆರೆ ತಾಲೂಕಿಗೆ ಸಂಬಂಧಿಸಿದಂತೆ ಬಿಡಿ ಲೇಖನಗಳು ಪ್ರಕಟವಾಗಿವೆ. ಅವುಗಳಲ್ಲಿ ಕೆ.ಎಲ್. ಭೈರಪ್ಪನವರ "ತುರುವೇಕೆರೆ ತಾಲೂಕು ದರ್ಶನ" ಎಂಬ ಕಿರು ಪುಸ್ತಕದಲ್ಲಿ ತುರುವೇಕೆರೆ ತಾಲೂಕಿನ ಸ್ಥೂಲ ಪರಿಚಯ ಮಾಡಿದ್ದಾರೆ. ಕೆ.ಬಿ. ಶಿವತಾರಕ್‌ರವರು "ತುಮಕೂರು ಜಿಲ್ಲೆಯ ಪ್ರಾಗಿತಿಹಾಸ ಒಂದು ಸಾಂಸ್ಕೃತಿಕ ಅಧ್ಯಯನ" ಎಂಬ ಮಹಾಪ್ರಬಂಧದಲ್ಲಿ ತುರುವೇಕೆರೆಯ ಪ್ರಾಗಿತಿಹಾಸದ ನೆಲೆಗಳ ಬಗ್ಗೆ ತಿಳಿಸಿದ್ದಾರೆ. ಅಭಿಶಂಕರ್‌ರವರ "ತುಮಕೂರು ಜಿಲ್ಲಾ ಗ್ಯಾಸೆಟಿಯರ್"ನಲ್ಲಿ ತುರುವೇಕೆರೆಯ ಕೃಷಿ ಮತ್ತು ಕೆರೆ ನೀರಾವರಿಯ ಬಗ್ಗೆ ಸಂಕ್ಷಿಪ್ತವಾಗಿ ಮಾಹಿತಿ ನೀಡಲಾಗಿದೆ. ಸಿ. ಹಯವದನರಾವ್‌ರವರ "ಹಿಸ್ಟರಿ ಆಫ್ ಮೈಸೂರು" ಸಂಪುಟ ೫ರಲ್ಲಿ ತುರುವೇಕೆರೆಯ ಐತಿಹಾಸಿಕ ಸ್ಥಳಗಳನ್ನು ಕುರಿತು ಪ್ರಸ್ತಾಪಿಸಲಾಗಿದೆ. ಸಿ.ಎನ್. ಭಾಸ್ಕರಪ್ಪರವರ "ತುಮಕೂರು ಜಿಲ್ಲಾ ದರ್ಶನ" ಎಂಬ ಕೃತಿಯಲ್ಲಿ ತುರುವೇಕೆರೆಯ ಪೌರಾಣಿಕ ಮತ್ತು ಚಾರಿತ್ರಿಕ ಹಿನ್ನೆಲೆಯನ್ನು ವಿವರಿಸಲಾಗಿದೆ. ಯೋಗೀಶ್ವರಪ್ಪ ಡಿ.ಎನ್.ರವರ "ಕಲ್ಪಸಿರಿ" ಲೇಖನದಲ್ಲಿ ತುರುವೇಕೆರೆಯ ದೇವಾಲಯಗಳ ಬಗ್ಗೆ ಚರ್ಚಿಸಲಾಗಿದೆ. ಆರ್. ಗೋಪಾಲ್‌ರವರ "ತುಮಕೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ" ಗ್ರಂಥದಲ್ಲಿ ತುರುವೇಕೆರೆ ತಾಲೂಕಿನ ನೀರಿನ ನಿರ್ವಹಣೆಯ ನಿಯಮಗಳನ್ನು ಕುರಿತು ಪ್ರಸ್ತಾಪಿಸಿದ್ದಾರೆ. ಇದನ್ನು ಹೊರತುಪಡಿಸಿದರೆ ಇಲ್ಲಿನ ಕೆರೆ ನೀರಾವರಿ ಕುರಿತು ಪ್ರತ್ಯೇಕ ಅಧ್ಯಯನ ನಡೆದಿಲ್ಲವೆಂದೇ ಹೇಳಬಹುದು. ಅಂತಹ ಒಂದು ಚಿಕ್ಕ ಪ್ರಯತ್ನವನ್ನು ಪ್ರಸ್ತುತ ಅಧ್ಯಯನದಲ್ಲಿ ಮಾಡಲಾಗಿದೆ.

**ಅಧ್ಯಯನದ ವಿಧಾನ:**

ತುರುವೇಕೆರೆ ತಾಲೂಕಿನ ಕೆರೆಗಳನ್ನು ಕುರಿತ ಅಧ್ಯಯನವು ಹೆಚ್ಚಾಗಿ ಕ್ಷೇತ್ರಕಾರ್ಯವನ್ನು ಅವಲಂಬಿಸಿದೆ. ಇದರ ಬಗ್ಗೆ ಇದುವರೆಗೂ ನಡೆದಿರುವ ಅಧ್ಯಯನಗಳನ್ನು ಗಮನದಲ್ಲಿಟ್ಟುಕೊಂಡು

ಕ್ಷೇತ್ರಕಾರ್ಯದ ಮೂಲಕ ಮಾಹಿತಿಗಳನ್ನು ಕ್ರೋಡೀಕರಿಸುವುದು ಮತ್ತು ಕೆರೆಗಳು, ಅದರ ಪರಿಸರಿದಲ್ಲಿರುವ ಶಾಸನಗಳು, ದೇವಾಲಯಗಳನ್ನು ಸಹ ದಾಖಲಿಸಿ ಆ ಮೂಲಕ ಕೆರೆಗಳಿಗಿರುವ ಸಂಬಂಧವನ್ನು ಗುರುತಿಸುವುದು.

ಕೆರೆಗಳ ಬಗ್ಗೆ ಸಣ್ಣ ನೀರಾವರಿ ಇಲಾಖೆಯು ನೀಡಿದ ದಾಖಲೆಗಳು ಮತ್ತು ಕೃಷಿ ಇಲಾಖೆಯಿಂದ ಬೆಳೆಗಳಿಗೆ ಸಂಬಂಧಿಸಿದ ವರದಿಗಳನ್ನು ಸಂಗ್ರಹಿಸಿ ಬಳಸಿಕೊಳ್ಳಲಾಗಿದೆ. ಹಾಗೂ ಅಧ್ಯಯನಕ್ಕೆ ಪೂರಕವಾಗಿರುವ ಗ್ರಂಥಗಳಿಂದಲೂ ಮಾಹಿತಿ ಪಡೆಯಲಾಗಿದೆ. ಕೆರೆಗಳ ಏರಿ, ತೂಬು, ಕೋಡಿ, ಕಾಲುವೆ, ಇವುಗಳ ಛಾಯಾಚಿತ್ರಗಳನ್ನು ಸಂಗ್ರಹಿಸಲಾಗಿದೆ. ಗ್ರಂಥಾಲಯಗಳಲ್ಲಿ ಅಧ್ಯಯನಕ್ಕೆ ಅಗತ್ಯವಾದ ಮಾಹಿತಿಗಳನ್ನು ಪಡೆಯಲಾಗಿದೆ. ಈ ಮಾಹಿತಿಗಳನ್ನು ಇಂಡೆಕ್ಸ್ ಕಾರ್ಡ್‌ಗಳಲ್ಲಿ ದಾಖಲಿಸಿಕೊಂಡು ನಂತರ ವರ್ಗೀಕರಿಸಿ ವಿಷಯಗಳನ್ನು ವಿಶ್ಲೇಷಿಸಿ, ಸಂಬಂಧಪಟ್ಟ ಅಧ್ಯಾಯಗಳಲ್ಲಿ ಅಳವಡಿಸಿಕೊಂಡು ಈ ಸಂಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

ಪ್ರಸ್ತುತ "ತುರುವೇಕೆರೆ ತಾಲೂಕಿನ ಕೆರೆಗಳ ಸಾಂಸ್ಕೃತಿಕ ಅಧ್ಯಯನ" ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಆರು ಅಧ್ಯಾಯಗಳನ್ನಾಗಿ ವಿಭಾಗಿಸಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಪೀಠಿಕೆ, ಅಧ್ಯಯನದ ಉದ್ದೇಶ, ವ್ಯಾಪ್ತಿ, ಇದುವರೆಗೂ ನಡೆದಿರುವ ಅಧ್ಯಯನಗಳ ಸಮೀಕ್ಷೆ, ಅಧ್ಯಯನದ ವಿಧಾನಗಳ ಬಗ್ಗೆ ನಿರೂಪಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ತುರುವೇಕೆರೆ ತಾಲೂಕಿನ ಭೌಗೋಳಿಕ ಪರಿಚಯ ಹಾಗೂ ಚಾರಿತ್ರಿಕ ಹಿನ್ನೆಲೆಯನ್ನು ಪ್ರಸ್ತಾಪಿಸಲಾಗಿದೆ. ಈ ಭೌಗೋಳಿಕತೆಯಲ್ಲಿ ತುರುವೇಕೆರೆಯ ಜನಸಂಖ್ಯೆ, ಜಾತಿ ಜನಾಂಗ, ಬೆಟ್ಟಗುಡ್ಡ, ಅರಣ್ಯಸಂಪತ್ತು ಮತ್ತು ಕೃಷಿ ಬೆಳೆಗಳ ಬಗ್ಗೆ ವಿವರಿಸಲಾಗಿದೆ. ಹಾಗೂ ಚಾರಿತ್ರಿಕ ಹಿನ್ನೆಲೆಯಲ್ಲಿ ತಾಲೂಕಿನ ಪ್ರಾಗಿತಿಹಾಸ ಮತ್ತು ವಿವಿಧ ರಾಜಮನೆತನಗಳ ಆಳ್ವಿಕೆ ಅವಧಿಯಲ್ಲಿ ನಿರ್ಮಿಸಲಾದ ಕೆರೆಗಳ ಬಗ್ಗೆ ತಿಳಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಕೆರೆಗಳು, ಕೆರೆಗೆ ಸಂಬಂಧಿಸಿದ ಕೆಲವು ಮುಖ್ಯ ಭಾಗಗಳಾದ ಏರಿ ನಿರ್ಮಾಣ, ತೂಬು ರಚನೆ, ಕಾಲುವೆಗಳು, ಕೋಡಿಗಳು ಮತ್ತು ಕೆರೆಯ ನಿರ್ವಹಣೆಯ ಬಗ್ಗೆ ಶಾಸನಗಳ ಹಿನ್ನೆಲೆಯಲ್ಲಿ ವಿವರಿಸಲಾಗಿದೆ ಹಾಗೂ ಈ ತಾಲೂಕಿನ ಪ್ರಮುಖ ಕೆರೆಗಳ ಬಗ್ಗೆ ಚರ್ಚಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಕೆರೆ ಆಧಾರಿತವಾಗಿ ಬೆಳೆದ ಕೃಷಿ ಬೆಳೆಗಳಿಗೆ ನೀರು ಎಷ್ಟು ಬಾರೀ ಬಳಕೆಯಾಗುತ್ತಿದೆ ಹಾಗೂ ಅಲ್ಲಿ ಬೆಳೆದ ಬೆಳೆಗಳನ್ನು ಅಂಕಿ ಅಂಶಗಳ ಆಧಾರದ ಮೇಲೆ ವಿಶ್ಲೇಷಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಕೆರೆಯಲ್ಲಿ ಜಾರಿಯಲ್ಲಿರುವ ಸಾಂಸ್ಕೃತಿಕ ಆಚರಣೆಯ ಬಗ್ಗೆ ಪ್ರಸ್ತಾಪಿಸಲಾಗಿದೆ.

ಕೊನೆಯ ಅಧ್ಯಾಯವು ಸಮಾರೋಪವನ್ನು ಒಳಗೊಂಡಿದ್ದು, ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳನ್ನು ನಿರೂಪಿಸಲಾಗಿದೆ.

ಅನುಬಂಧದಲ್ಲಿ ಗ್ರಂಥಸೂಚಿ, ಪದಕೋಶ, ವಕ್ತೃಗಳ ವಿವರಗಳಿದ್ದು, ನಂತರ ತಾಲೂಕಿನ ಸಮಗ್ರ ಕೆರೆಗಳ ವಿವರ ಪಟ್ಟಿ, ಮತ್ತು ಕೆರೆ ಆಧಾರಿತ ಬೆಳೆದ ಬೆಳೆಗಳ ಅಂಕಿ-ಅಂಶಗಳ ಒಟ್ಟು ವಿವರ ಹಾಗೂ ಛಾಯಾಚಿತ್ರಗಳನ್ನು ಅಳವಡಿಸಲಾಗಿದೆ.

**ಅಡಿಟಿಪ್ಪಣಿಗಳು:**

೧. ವಾಸುದೇವನ್ ಸಿ.ಎಸ್, ೨೦೦೧; ಹಂಪಿ ಪರಿಸರದ ಕೆರೆಗಳು, ಪು.೪.

೨. ದೀಕ್ಷಿತ್ ಜಿ.ಎಸ್, ಕುಪ್ಪಸ್ವಾಮಿ ಜಿ.ಎಸ್, ಮೋಹನ್ ಎಸ್.ಕೆ, (ಕನ್ನಡ ಅನುವಾದ) ನೀಲತ್ತ ಹಳ್ಳಿ ಕಸ್ತೂರಿ, ೨೦೦೦; ಕರ್ನಾಟಕದಲ್ಲಿ ಕೆರೆ ನೀರಾವರಿ, ಪು.೧.

೩. ನಾಗರಾಜ ಎಂ.ಜಿ. (ಸಂ), ೨೦೦೧; ಇತಿಹಾಸ ದರ್ಶನ, ಸಂ.೧೬, ಕರ್ನಾಟಕ ಇತಿಹಾಸ ಅಕಾಡೆಮಿ (ರಿ), ಬೆಂಗಳೂರು.

೪. ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ, ಪು. ೭೪೭.

# ಅಧ್ಯಾಯ ೨

# ಭೌಗೋಳಿಕತೆ ಮತ್ತು ಚಾರಿತ್ರಿಕ ಹಿನ್ನೆಲೆ

## ಭೌಗೋಳಿಕತೆ

ಯಾವುದೇ ಒಂದು ಪ್ರದೇಶದ ಅಧ್ಯಯನ ಕೈಗೊಳ್ಳುವ ಪೂರ್ವದಲ್ಲಿ ಆ ಪ್ರದೇಶದ ಭೌಗೋಳಿಕ ವಿವರಗಳನ್ನು ತಿಳಿದುಕೊಳ್ಳುವುದು ಅಗತ್ಯವಾಗಿದೆ. ಇತಿಹಾಸ ಮತ್ತು ಭೂಗೋಳ ಶಾಸ್ತ್ರಗಳು ಪರಸ್ಪರ ನಿಕಟವಾದ ಸಂಬಂಧ ಹೊಂದಿವೆ. ಭೌಗೋಳಿಕ ಅಂಶಗಳು ಪ್ರಭಾವ ಬೀರದ ಪ್ರದೇಶವಿಲ್ಲವೆಂದೇ ಹೇಳಬಹುದು. ಕಾರಣ ಆ ಪ್ರದೇಶದ ಜನರ ಜೀವನವನ್ನು ರೂಪಿಸುವಲ್ಲಿ ಭೌಗೋಳಿಕ ಪರಿಸರದ ಪಾತ್ರ ಪ್ರಮುಖವಾಗಿದೆ. ಪ್ರಾಚೀನ ನಾಗರೀಕತೆಗಳ ಉಗಮ ಮತ್ತು ವಿಕಾಸ ನದಿ ದಂಡೆಗಳ ಮೇಲೆ ಆಗಿರುವುದನ್ನು ಗಮನಿಸಿದಾಗ ಭೌಗೋಳಿಕ ಅಂಶಗಳ ಪ್ರಾಮುಖ್ಯತೆಯನ್ನು ತಿಳಿಯಬಹುದು. ಒಂದು ಪ್ರದೇಶದಲ್ಲಿ ಮಾನವನು ನೆಲೆ ನಿಲ್ಲಲು ಆ ಪ್ರದೇಶದಲ್ಲಿ ಹುಟ್ಟಿ ಹರಿಯುವ ನದಿಗಳು, ತೀರ ಪ್ರದೇಶ, ಪರ್ವತ ಶ್ರೇಣಿ, ಭೂಗರ್ಭ ಸಂಪತ್ತು, ಅರಣ್ಯ ಸಂಪತ್ತು, ಹವಾಗುಣ, ಉಷ್ಣಾಂಶ, ರೇಖಾಂಶ ಮತ್ತು ಮಣ್ಣಿನ ರಚನೆ ಮುಂತಾದ ಭೌಗೋಳಿಕ ಅಂಶಗಳು ಕಾರಣವಾಗಿವೆ. ಈ ಹಿನ್ನೆಲೆಯಲ್ಲಿ ಆಯಾ ಪ್ರದೇಶದ ಇತಿಹಾಸ ಮತ್ತು ಸಂಸ್ಕೃತಿಯನ್ನು ತಿಳಿಯಲು ಭೌಗೋಳಿಕ ಅಂಶಗಳು ಸಹಕಾರಿಯಾಗಿವೆ.

ತುರುವೇಕೆರೆ ತಾಲೂಕಿನ ಕೆರೆಗಳ ಅಧ್ಯಯನಕ್ಕೆ ತೊಡಗುವ ಮೊದಲು ಆ ಪ್ರದೇಶದ ಭೌಗೋಳಿಕ ಲಕ್ಷಣಗಳು ಯಾವ ರೀತಿ ಪ್ರಭಾವ ಬೀರಿವೆ ಎಂದು ತಿಳಿದುಕೊಳ್ಳುವುದು ಅಗತ್ಯವಾಗಿದೆ. ತುರುವೇಕೆರೆಯು ಕರ್ನಾಟಕ ರಾಜ್ಯದ ದಕ್ಷಿಣ ಹೊರವಲಯದ ಆರನೇ ವಲಯಕ್ಕೆ ಸೇರುತ್ತದೆ.ಇದು ಆಂಧ್ರಪ್ರದೇಶದ ಗಡಿಭಾಗ ಹೊಂದಿರುವ ಪಾವಗಡವನ್ನು ಒಳಗೊಂಡಂತೆ ಹತ್ತು ತಾಲೂಕುಗಳನ್ನು ಹೊಂದಿರುವ ತುಮಕೂರು ಜಿಲ್ಲೆಯ ಒಂದು ತಾಲೂಕು ಕೇಂದ್ರವಾಗಿದೆ.

ಇದು ೭,೭೦೬ ಚ.ಕಿ.ಮೀ. ಅಥವಾ ೭೫.೯೬೪ ಹೆಕ್ಟೇರ್ ಭೌಗೋಳಿಕ ವಿಸ್ತೀರ್ಣ ಹೊಂದಿದೆ.[೧] ಇದರಲ್ಲಿ ೨೪೩ ಗ್ರಾಮಗಳಿವೆ. ತಾಲೂಕಿನ ದಕ್ಷಿಣದಲ್ಲಿ ಮಂಡ್ಯ ಜಿಲ್ಲೆಗೆ ಸೇರಿದ ನಾಗಮಂಗಲ, ಪಶ್ಚಿಮ ಮತ್ತು ವಾಯುವ್ಯದಲ್ಲಿ ತಿಪಟೂರು, ಪೂರ್ವ ಮತ್ತು ಈಶಾನ್ಯದಲ್ಲಿ ಗುಬ್ಬಿ, ಆಗ್ನೇಯದಲ್ಲಿ ಕುಣಿಗಲ್ ತಾಲೂಕುಗಳು ಸುತ್ತುವರಿದಿವೆ.[೨] ಈ ತಾಲೂಕನ್ನು ಆಡಳಿತಾನುಕೂಲಕ್ಕಾಗಿ ನಾಲ್ಕು ಹೋಬಳಿಗಳನ್ನಾಗಿ ವಿಭಾಗಿಸಲಾಗಿದೆ. ಅವುಗಳೆಂದರೆ ತುರುವೇಕೆರೆ, ಮಾಯಸಂದ್ರ, ದಬ್ಬೇಘಟ್ಟ, ಮತ್ತು ದಂಡಿಶಿವರಗಳಾಗಿವೆ. ತುರುವೇಕೆರೆಯು ೧೨.೫° ಎತ್ತರ ೧೫° ಎತ್ತರ ಅಕ್ಷಾಂಶ ಹಾಗೂ ೭೬.೫° ಪೂರ್ವ ೭೭° ಪೂರ್ವ ರೇಖಾಂಶದಲ್ಲಿದೆ.[೩]

ತುರುವೇಕೆರೆ ತಾಲೂಕಿನ ಜನಸಂಖ್ಯೆ ೨೦೦೧ ಜನಗಣತಿ ಪ್ರಕಾರ ೧,೭೪,೨೯೭ ಇದ್ದು, ಇದರಲ್ಲಿ ಪುರುಷರು ೮೭,೦೯೧ ಮತ್ತು ಮಹಿಳೆಯರು ೮೭,೨೦೬ರಷ್ಟು ಇರುವವರು. ಗ್ರಾಮಾಂತರ ಪ್ರದೇಶದಲ್ಲಿ ೧,೫೬,೭೮೦ ಮತ್ತು ನಗರಪ್ರದೇಶದಲ್ಲಿ ೧೭,೫೧೭ರಷ್ಟು ಜನರು ವಾಸಿಸುತ್ತಿದ್ದಾರೆ. ಪ್ರತಿ ಸಾವಿರ ಮಹಿಳೆಯರಿಗೆ ಪುರುಷರ ಪ್ರಮಾಣ ೯೯೮ರಷ್ಟಿದೆ. ಮತ್ತು ಜನಸಾಂದ್ರತೆ ಪ್ರತಿ ಚ.ಕಿ.ಮೀ.ಗೆ ೨೧೨ರಷ್ಟು ಇದೆ. ೨೦೦೧ ಜನಗಣತಿ ಪ್ರಕಾರ ೧೧,೪೮೩ ಪರಿಶಿಷ್ಟ ಜಾತಿಯ ಪುರುಷರು ಮತ್ತು ೧೧,೪೨೪ ಮಹಿಳೆಯರು ಇದ್ದಾರೆ. ಹಾಗೂ ೨,೨೨೮ ಪರಿಶಿಷ್ಟ ವರ್ಗಗಳ ಪುರುಷರು ಮತ್ತು ೨,೨೩೧ ಮಹಿಳೆಯರು ಇರುವುದು ಕಂಡುಬಂದಿದೆ.[೪]

## ೨೦೦೧ರ ಸಾಕ್ಷರತಾ ಪ್ರಮಾಣದ ವಿವರ

| | ಒಟ್ಟು ಸಾಕ್ಷರತಾ ಪ್ರಮಾಣ | ಪುರುಷರು | ಮಹಿಳೆಯರು |
|---|---|---|---|
| ತಾಲೂಕಿನ ಸಾಕ್ಷರತಾ ಪ್ರಮಾಣ | ೭೧.೪ | ೮೧.೭ | ೬೧.೧ |
| ಗ್ರಾಮೀಣ | ೬೯.೮ | ೮೦.೬ | ೫೯.೧ |
| ನಗರ | ೮೫.೬ | ೯೦.೭ | ೮೦.೧ |

ಈ ಪ್ರದೇಶದಲ್ಲಿ ಬ್ರಾಹ್ಮಣರು, ವೈಷ್ಣವರು, ವೀರಶೈವರು, ಒಕ್ಕಲಿಗರು, ಅಕ್ಕಸಾಲಿಗರು, ದೇವಾಂಗದ ನೇಕಾರರು, ಬಣಜಿಗರು, ಕುರುಬರು, ಕುಂಬಾರರು, ಜೈನರು, ಮುಸಲ್ಮಾನರು ಮತ್ತು ಕ್ರೈಸ್ತರು, ಅತ್ಯಲ್ಪಸಂಖ್ಯೆಯಲ್ಲಿದ್ದಾರೆ. ಈ ಜನರು ವ್ಯವಸಾಯ. ವ್ಯಾಪಾರ, ಪಶುಪಾಲನೆ, ಕುರಿಸಾಕಣೆ, ಹಂದಿಸಾಕಾಣೆ, ಮತ್ತು ನೇಯ್ಗೆಕೆಲಸ ಮುಂತಾದ ಮುಖ್ಯ ಕಸುಬುಗಳ ಜೊತೆಗೆ ಇತರ ಕೆಲವು ಉಪಕಸುಬುಗಳನ್ನಾಧರಿಸಿದ್ದಾರೆ.[೫]

ತುರುವೇಕೆರೆ ಪರಿಸರದಲ್ಲಿ ಬೆಟ್ಟ ಗುಡ್ಡಗಳಿವೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ ವಿಠಲಾಪುರ ಬೆಟ್ಟ, ಬೈತರ ಹೊಸಹಳ್ಳಿ ಬೆಟ್ಟ, ರಾಮಸಾಗರ ಬೆಟ್ಟ ಮತ್ತು ಕಡೇಹಳ್ಳಿ ಗುಡ್ಡ ಇತ್ಯಾದಿ. ಈ ಎಲ್ಲಾ ಬೆಟ್ಟ ಗುಡ್ಡಗಳು ಕಂಡುಬರುತ್ತವೆ. ಇತ್ತೀಚೆಗೆ ಅರಣ್ಯ ಸಂಪತ್ತನ್ನು ಅಭಿವೃದ್ಧಿಪಡಿಸುವ ದಿಸೆಯಲ್ಲಿ ವ್ಯಾಪಕ ಪ್ರಯತ್ನಗಳಾಗಿವೆ. ಇವು ಅಷ್ಟೇನು ಎತ್ತರವಾಗಿಲ್ಲದಿರುವುದರಿಂದ ಇತ್ತೀಚೆಗೆ ಇವುಗಳಲ್ಲಿನ ಬಂಡೆಗಳನ್ನು ಗಣನೀಯ ಪ್ರಮಾಣದಲ್ಲಿ ಒಡೆದು ವಿವಿಧ ಉದ್ದೇಶಗಳಿಗಾಗಿ ಸಾಗಿಸಲಾಗುತ್ತಿದೆ.[೬] ರಸ್ತೆಯ ಜಲ್ಲಿಕಲ್ಲುಗಳಿಗಾಗಿ, ಕಟ್ಟಡಗಳ ನಿರ್ಮಾಣಕ್ಕಾಗಿ, ಸಾಗರೋತ್ತರ ಸಾಗಾಣಿಕೆಯ ಉದ್ದೇಶಕ್ಕಾಗಿ ಈ ಬೆಟ್ಟಗಳಿಂದ ಕಲ್ಲುಗಳನ್ನು ಉಪಯೋಗಿಸಲಾಗುತ್ತಿದೆ. ಕಡೇಹಳ್ಳಿಗುಡ್ಡ ಮೊದಲಾದ ಕಡೆ ಸಿಗುವ ಕಲ್ಲುಗಳು ಶಿಲ್ಪಕಲೆಗೆ ಉಪಯುಕ್ತವಾಗಿದ್ದು, ಬೇಲೂರು ಹಳೆಬೀಡುಗಳಲ್ಲಿರುವ ಬಹುತೇಕ ವಿಗ್ರಹಗಳಿಗೆ ಇಲ್ಲಿಂದಲೇ ಕಲ್ಲುಗಳನ್ನು ಸಾಗಿಸಿ ಉಪಯೋಗಿಸಲಾಗಿದೆ ಎಂಬ ಪ್ರತೀತಿ ಇದೆ.[೭]

ತುರುವೇಕೆರೆ ನೈರುತ್ಯ ದಿಕ್ಕಿನಲ್ಲಿ ಸುಮಾರು ೯ಮೀ ಅಗಲ ಹಾಗೂ ೮ಮೀ ಮೇಲ್ಪಟ್ಟು ವ್ಯಾಪಿಸಿರುವ ಕರೇಕಲ್ಲು ಗುಡ್ಡವಿದೆ. ಈ ಕರೇಕಲ್ಲು ೬ಮೀ. ಗಳಷ್ಟು ಎತ್ತರವಾಗಿದ್ದು, ಚಿತ್ರದುರ್ಗ ಮತ್ತು ಧಾರವಾಡ ಜಿಲ್ಲೆಗಳಲ್ಲಿಯ ಬಂಡೆಕಲ್ಲುಗಳ ಗುಂಪಿಗೆ ಸೇರಿದೆ. ಕಪ್ಪು ಬಣ್ಣದ ಗಡಸು ಮತ್ತು ಬೆಣಚು ಜಾತಿಯ ಶಿಲಾಕಣಗಳಿಂದ ಕೂಡಿದೆ. ಕರೇಕಲ್ಲು ಗಾಳಿ ಮಳೆಗಳಿಗೆ ಸಿಕ್ಕಿ ತನ್ನಲ್ಲಿದ್ದ ಲೋಹಾಂಶವನ್ನು ಕಳೆದುಕೊಂಡಿರುವುದಲ್ಲದೆ, ಸವಕಳಿಗೆ ಸಿಕ್ಕಿ ಗಾತ್ರ ಮತ್ತು ಆಕಾರಗಳಲ್ಲಿ ದಿನೆ ದಿನೆ ವ್ಯತ್ಯಾಸವಾಗಿರುತ್ತದೆ. ಈ ಭಾಗದಲ್ಲಿ ದೊರೆಯುವ ಕರೇಕಲ್ಲು, ಕಟ್ಟಡಗಳಿಗೂ, ವಿಗ್ರಹಗಳ ಕೆತ್ತನೆಗೂ ಉಪಯುಕ್ತವಾಗಿರುವುದು ಕಂಡುಬಂದಿದೆ. ತುರುವೇಕೆರೆಯಲ್ಲಿನ ದೊಡ್ಡ ಬಸವಣ್ಣನ ವಿಗ್ರಹವು ಈ ಕರೇಕಲ್ಲಿನಿಂದಾದ ಸುಂದರ ಶಿಲ್ಪವಾಗಿದೆ. ಶ್ರೀರಂಗಪಟ್ಟಣದಲ್ಲಿದ್ದ ಹೈದರಾಲಿಯ ಅರಮನೆಗಳ ನಿರ್ಮಾಣ ಕಾಲದಲ್ಲಿ ಉಪಯೋಗಿಸಲ್ಪಟ್ಟ ಕಲ್ಲಿನ ಕಂಭಗಳು, ಈ ಪ್ರಾಂತ್ಯದಿಂದ ಕೊಂಡೊಯ್ದು, ನಯ ಮಾಡಿದ ಕರೇಕಲ್ಲಿನಿಂದ ಆದವು ಎಂದು ತಿಳಿದುಬಂದಿದೆ.[೮]

ನಮ್ಮ ಜೀವಿ ವೈವಿಧ್ಯಮಯದಲ್ಲಿ ಅರಣ್ಯ ಮತ್ತು ಮಾನವನ ಸಂಬಂಧ ಅನನ್ಯವಾದುದು. ಆರಂಭದಿಂದಲೂ ಮಾನವ ತನ್ನ ಬದುಕಿಗೆ ಅರಣ್ಯವನ್ನು ಅವಲಂಬಿಸಿಯೇ ಜೀವಿಸಿದ್ದಾನೆ. ಪ್ರಕೃತಿದತ್ತ ಅರಣ್ಯ ಮಾನವನ ಭೌತಿಕ ಅಗತ್ಯಗಳನ್ನು ಪೂರೈಸುವುದರೊಂದಿಗೆ, ಶುದ್ಧ ಗಾಳಿ, ನೀರು, ಮಣ್ಣಿನ ಫಲವತ್ತತೆ, ಭೂಮಿಯ ತೇವಾಂಶವನ್ನು ಹಿಡಿದಿಡುತ್ತದೆ. ತುರುವೇಕೆರೆ ತಾಲೂಕು ಕಡಿಮೆ ಅರಣ್ಯ ಪ್ರದೇಶವನ್ನು ಹೊಂದಿದೆ. ಈ ತಾಲೂಕಿನಲ್ಲಿ ಒಟ್ಟು ಸುಮಾರು ೫೬೧ ಹೆಕ್ಟೇರುಗಳಷ್ಟು ಅರಣ್ಯ ಪ್ರದೇಶವಿದೆ.[೯] ಮಾಯಸಂದ್ರ ಹೋಬಳಿಯ ಸೀಗೇಹಳ್ಳಿ ಮೊದಲಾದ ಪ್ರದೇಶಗಳಲ್ಲಿ ಅರಣ್ಯಾಭಿವೃದ್ಧಿಗಾಗಿ ಅರಣ್ಯ ಇಲಾಖೆಯು ಗಮನಾರ್ಹವಾಗಿ ಕಾರ್ಯ

ಪ್ರವೃತ್ತಿಯಾಗಿದೆ. ಕುರುಚಲು ಪೊದೆಗಳು, ಸೀತಾಫಲ, ಹಣ್ಣಿನ ಗಿಡಗಳು, ಮಾವು, ಬೇವು, ಬಸರಿ, ಆಲ, ನೇರಳೆ, ಹುಣಸೆ, ಜಾಲಿ, ಬನ್ನಿ ಮತ್ತು ಈಚಲ ಮರಗಳು ಕಂಡುಬಂದಿವೆ. ಅರಣ್ಯ ಇಲಾಖೆಯವರು ಸುಬಾಬುಲ್, ಗ್ಲಿಸೀಡಿಯಾ, ಸರ್ವೆ, ನೀಲಿಗಿರಿ, ತೇಗ ಮೊದಲಾದ ಮರಗಳನ್ನು ಬೆಳೆಸುವುದರಲ್ಲಿ ಕಾರ್ಯನಿರತರಾಗಿದ್ದಾರೆ. ರಸ್ತೆ ಬದಿಗಳನ್ನು ಒಳಗೊಂಡಂತೆ ಹಲವಾರು ಕಡೆ ಗಿಡಗಳನ್ನು ನೆಟ್ಟು ಬೆಳೆಸಿ ಅರಣ್ಯ ಅಭಿವೃದ್ಧಿ ಮಾಡಲಾಗುತ್ತಿದೆ. ಈ ಪರಿಸರದಲ್ಲಿ ಮೊಲ, ನರಿ, ಜಿಂಕೆ, ಕತ್ತೆಕಿರುಬ, ಮುಂಗುಸಿ, ಹಾವು, ಉಡ, ಕಾಡುಹಂದಿ, ಮುಂತಾದವುಗಳು ವನ್ಯಜೀವಿಗಳಾಗಿವೆ.[೧೦]

ತುರುವೇಕೆರೆ ತಾಲೂಕು ಹಿಂದಿನಿಂದಲೂ ಬಯಲು ಸೀಮೆ ಪ್ರದೇಶವಾಗಿದ್ದು, ಇಂದು ಕಲ್ಪತರು ನಾಡಾಗುತ್ತಿದೆ. ಇಲ್ಲಿನ ವಾಯುಗುಣ ಹಿತಕರವಾಗಿರುತ್ತದೆ. ಜೂನ್ ತಿಂಗಳಿನಿಂದ ಅಕ್ಟೋಬರ್‌ವರೆಗೆ ಮಳೆಗಾಲವಿರುತ್ತದೆ. ನವಂಬರ್ ತಿಂಗಳಿನಿಂದ ಜನವರಿವರೆಗೆ ಚಳಿಗಾಲವಿರುತ್ತದೆ. ಫೆಬ್ರವರಿ ತಿಂಗಳಿನಿಂದ ಮೇ ವರೆಗೆ ಬೇಸಿಗೆ ಕಾಲ ಇರುತ್ತದೆ. ತಾಲೂಕಿನ ವಾರ್ಷಿಕ ಮಳೆಯೂ ಸರಾಸರಿ ೬೬೫.೯ ಮಿ.ಮೀ.[೧೧] ಬಹಳಷ್ಟು ಮಳೆಯು ನೈರುತ್ಯ ಮಾರುತಗಳಿಂದ ಬರುತ್ತದೆ. ನೈರುತ್ಯ ಮಾರುತವು ಸಾಮಾನ್ಯವಾಗಿ ಮೇ ತಿಂಗಳ ಕೊನೆಯಿಂದ ಜೂನ್ ತಿಂಗಳ ಮೊದಲನೆಯ ವಾರದಿಂದ ಪ್ರಾರಂಭವಾಗುತ್ತದೆ. ಈಶಾನ್ಯ ಮಾರುತವು ಸೆಪ್ಟೆಂಬರ್ ಅಂತ್ಯದಿಂದ ಪ್ರಾರಂಭವಾಗಿ ಡಿಸೆಂಬರ್ ಅಂತ್ಯದವರೆಗೆ ಮುಂದುವರೆಯುತ್ತದೆ.

ಈ ತಾಲೂಕಿನಲ್ಲಿ ಕಸಬಾ, ದಂಡಿಶಿವರ, ಸಂಪಿಗೆ, ಮಾಯಸಂದ್ರ ಮತ್ತು ದಬ್ಬೇಘಟ್ಟ ಎಂಬ ಒಟ್ಟು ೫ ಮಳೆ ಮಾಪನ ಕೇಂದ್ರಗಳಿವೆ. ಇಲ್ಲಿ ಸಮಶೀತೋಷ್ಣತೆ ಬಹಳ ಮಟ್ಟಿಗೆ ಕಂಡುಬರುತ್ತದೆ.

### ೨೦೦೮ ಮತ್ತು ೨೦೦೯ರ ಮಳೆ ಸರಾಸರಿ ವಿವರ[೧೨]

| ಕ್ರಸಂ. | ಮಾಹೆ | ವಾಡಿಕೆ ಮಳೆ | ೨೦೦೮ರಲ್ಲಿ ಬಿದ್ದ ಮಳೆ | ೨೦೦೯ರಲ್ಲಿ ಬಿದ್ದ ಮಳೆ |
|---|---|---|---|---|
| ೧. | ಜನವರಿ | ೧.೩ | – | – |
| ೨. | ಫೆಬ್ರವರಿ | ೨.೦ | ೧.೪ | – |
| ೩. | ಮಾರ್ಚ್ | ೮.೭ | ೩೮.೬೫ | – |
| ೪. | ಏಪ್ರಿಲ್ | ೩೨.೦ | ೯.೧ | ೩೭.೭ |
| ೫. | ಮೇ | ೯೮.೦ | ೬೫.೯ | ೮೧.೮ |
| ೬. | ಜೂನ್ | ೪೪.೩ | ೬೫.೯ | ೨೧.೯ |

| | | | | |
|---|---|---|---|---|
| ೭. | ಜುಲೈ | ೬೦.೦ | ೯೬.೩ | ೬೩.೬ |
| ೮. | ಅಗಸ್ಟ್ | ೬೫.೭ | ೧೭೫.೧ | ೯೮.೪ |
| ೯. | ಸೆಪ್ಟೆಂಬರ್ | ೧೪೩.೦ | ೭೨.೨ | ೨೩೨.೪ |
| ೧೦. | ಅಕ್ಟೋಬರ್ | ೧೪೯.೩ | ೧೩೦.೯ | ೭೪.೬ |
| ೧೧. | ನವಂಬರ್ | ೪೮.೩ | ೧೫.೨ | ೩೨.೬ |
| ೧೨. | ಡಿಸೆಂಬರ್ | ೧೩.೦ | – | – |
| | | ೬೬೫.೯ | ೬೫೮.೯ | ೬೪೨.೯ |

ಈ ಪ್ರದೇಶದ ಪ್ರಮುಖ ಜಲಸಂಪನ್ಮೂಲಗಳೆಂದರೆ ಕೆರೆಗಳು, ಕಟ್ಟೆಗಳು ಮತ್ತು ಬಾವಿಗಳಾಗಿವೆ. ಸಣ್ಣ ಹಾಗೂ ದೊಡ್ಡ ಕೆರೆಗಳು ಸಾಕಷ್ಟಿವೆ. ಪ್ರಾಚೀನ ಕಾಲದಿಂದಲೂ ನೀರಿನ ಆಸರೆಯಾಗಿ ಇಲ್ಲಿನ ಕೆರೆಗಳು ಪ್ರಮುಖ ಪಾತ್ರವಹಿಸುತ್ತವೆ. ಇವುಗಳ ಒಟ್ಟು ಅಚ್ಚುಕಟ್ಟು ಪ್ರದೇಶ ೧೯೩೨ ಹೆಕ್ಟೇರ್ ಜಲವಿಸ್ತೀರ್ಣ ೪೦೮೦.೧೫ ಹೆಕ್ಟೇರ್. ಇಲ್ಲಿ ಅಂತರ್ಜಲ ಸಂಪತ್ತು ಬಹಳ ಇಟ್ಟು ೬೨೦೦ ಕೊಳವೆ ಬಾವಿಗಳು ಕಂಡುಬಂದಿವೆ.[೧೩] ಅವುಗಳಿಂದ ೨೬೮೭ ಹೆಕ್ಟೇರ್‌ಗಳಿಗೆ ನೀರಾವರಿ ಆಗುತ್ತದೆ. ಹೇಮಾವತಿ ನಾಲೆಯ ನೀರು ಈ ತಾಲೂಕಿನ ಕೆರೆಗಳಿಗೆ ಹರಿದು ಬರುವುದರಿಂದ ಬೇಸಿಗೆ ಬೆಳೆ ಬೆಳೆಯಲು ಅನುಕೂಲಕರವಾಗಿದೆ. ಅಲ್ಲದೆ ಇನ್ನಿತರ ಬೆಳೆಗಳಾದ ಏಕದಳ ಧಾನ್ಯಗಳು ಭತ್ತ, ರಾಗಿ, ಜೋಳ, ದ್ವಿದಳ ಧಾನ್ಯಗಳಾದ, ತೊಗರಿ, ಹುರುಳಿ, ಉದ್ದು ಎಣ್ಣೆ ಕಾಳು ಬೆಳೆಗಳಾದ ನೆಲೆಗಡಲೆ, ಎಳ್ಳು, ಸೂರ್ಯಕಾಂತಿ ಮತ್ತು ವಾಣಿಜ್ಯ ಬೆಳೆಗಳಾದ ಕಬ್ಬು, ತೆಂಗು, ಅಡಿಕೆ ಇನ್ನೂ ಮುಂತಾದ ಬೆಳೆಗಳನ್ನು ಬೆಳೆಯಲು ಅನುಕೂಲವಾಗಿರುವವು.

**ಚಾರಿತ್ರಿಕ ಹಿನ್ನೆಲೆ:**

ತುರುವೇಕೆರೆಗೆ ಮೊದಲು "ವಿಜಯನರಸಿಂಹ ಪುರಿ" ಎಂಬ ಹೆಸರಿದ್ದು, ಕ್ರಮೇಣ ತುರುವೇಕೆರೆ ಎಂಬ ನಾಮಾಂಕಿತದಿಂದ ಪ್ರಸಿದ್ಧವಾಗಿದೆ.[೧೪] ತುರು ಎಂದರೆ 'ಗೋವು' ಎಂದು, ಕೆರೆ ಎಂಧರೆ 'ಜಲಸಂವೃದ್ಧಿ' ನಾಡು ಎಂಬ ಅರ್ಥವನ್ನು ಸೂಚಿಸುತ್ತದೆ. ಈ ಊರಿನ ಇತಿಹಾಸವು ದ್ವಾಪರ ಯುಗದಷ್ಟೇ ಪ್ರಾಚೀನವಾದುದಾಗಿದೆ. ದ್ವಾಪರಯುಗದಲ್ಲಿ ವೈಖಂಡ ಮುಖಿ ಮತ್ತು ಚಂದ್ರ ಚುಡಾಮುನಿಗಳು ಉತ್ತರ ಭಾರತದ ಬದರಿಯಿಂದ ತೀರ್ಥಯಾತ್ರೆ ಹೊರಟು ತಪಸ್ಸಿಗಾಗಿ ತುರುವೇಕೆರೆ ಸ್ಥಳವನ್ನು ಆರಿಸಿಕೊಂಡರು. ಅವರ ತಪಸ್ಸಿಗೆ ಮೆಚ್ಚಿ ಶ್ರೀ ಮಹಾವಿಷ್ಣುವು ಅವರ ಪ್ರಾರ್ಥನೆಯಂತೆ ಇಲ್ಲೆ ನೆಲೆಸುತ್ತಾನೆ. ಮಾಯಾವೀರಾಕ್ಷಸರು ಮೃಗರೂಪದಿಂದ ಜನರನ್ನು ಹಿಂಸೆಗೊಳಿಸುತ್ತಿದ್ದಾಗ ಮಹಾವಿಷ್ಣು ಅಶ್ವರೂಢನಾಗಿ ಬಂದು ಅವರನ್ನು ಸಂಹರಿಸಿದ್ದರಿಂದಲೇ ಸ್ವಾಮಿಗೆ 'ವರದ ಬೇಟರಾಯ ಸ್ವಾಮಿ' ಎಂಬ ಹೆಸರು ಬಂದಿತ್ತೆಂದು ಪ್ರತೀತಿ ಇದೆ.[೧೫] ಈಗಲೂ ಸಹ ತುರುವೇಕೆರೆ ನಗರದ ಆರಾಧ್ಯ ದೈವ ಬೇಟರಾಯಸ್ವಾಮಿ. ಈ ದೇವಾಲಯವು ಊರಿನ ಮಧ್ಯ ಭಾಗದಲ್ಲಿದೆ.

ತುರುವೇಕೆರೆ ತಾಲೂಕಿನಲ್ಲಿರುವ ಸಂಪಿಗೆ ಗ್ರಾಮವು ಪುರಾಣಗಳ ಕಾಲದಲ್ಲಿ 'ಚಂಪಕಾನಗರ'ವೆಂದು ಪ್ರಸಿದ್ಧವಾಗಿದ್ದಿತು. ಈ ಚಂಪಕಾನಗರವು ಮಹಾಭಾರತದ ವೀರನಾದ ಹಂಸಧ್ವಜ ಮಹಾರಾಜನ ಮಗ ವೀರ ಸುಧನ್ವನ ರಾಜಧಾನಿಯಾಗಿತ್ತೆಂದು ತಿಳಿದುಬರುತ್ತದೆ.[೧೬] ಈ ತಾಲೂಕಿನಲ್ಲಿ ಬರುವ ಹಳೇ ತಂಡಗ ಗ್ರಾಮವು ಶಕಪುರುಷನಾದ ಶಾಲಿವಾಹನನ ಜನ್ಮಸ್ಥಳವೆಂದು ತಿಳಿದುಬಂದಿದೆ.[೧೭] ಸಂಪಿಗೆ ಮತ್ತು ತಂಡಗ ಗ್ರಾಮಗಳು ತುರುವೇಕೆರೆ ತಾಲೂಕಿನ ಪುರಾಣ ಪ್ರಸಿದ್ಧ ಸ್ಥಳಗಳಾಗಿವೆ.

**ಪ್ರಾಗಿತಿಹಾಸ:**

ಪ್ರಾಗಿತಿಹಾಸ ಕಾಲದ ಮಾನವನಿಗೆ ಓದು ಬರಹದ ಅಥವಾ ಅಕ್ಷರದ ಜ್ಞಾನವಿರಲಿಲ್ಲ. ಸ್ವೇಚ್ಛಾ ಜೀವಿಯಾಗಿ ತನ್ನ ಮನಬಂದಂತೆ ಜೀವನ ಸಾಗಿಸುತ್ತಿದ್ದನು. ಅಲೆಮಾರಿಯಾಗಿದ್ದು, ಆಹಾರವನ್ನು ಬೇಟೆಯಾಡಿ ಪಡೆಯುತ್ತಿದ್ದನು. ಈ ಕಾಲಮಾನದ ಮಾನವನ ಉಗಮ ಮತ್ತು ವಿಕಾಸವನ್ನು ಅರಿಯಬೇಕಾದರೆ, ಆತನು ತನ್ನ ಜೀವನೋಪಾಯಕ್ಕಾಗಿ ಉಪಯೋಗಿಸಿದಂತಹ ವಿವಿಧ ವಸ್ತುಗಳು, ಉಪಕರಣಗಳ ಬಗ್ಗೆ ಅಧ್ಯಯನ ಮಾಡುವುದು ಅವಶ್ಯಕ. ಈ ಹಂತದಲ್ಲಿ ಬಳಕೆಯಲ್ಲಿದ್ದ ವಸ್ತುವಿನ ಆಧಾರದಿಂದ 'ಶಿಲಾಯುಗ ಸಂಸ್ಕೃತಿ' ಮತ್ತು 'ಲೋಹಯುಗ ಸಂಸ್ಕೃತಿ' ಎಂದು ಎರಡು ವಿಭಾಗಗಳನ್ನಾಗಿ ಮಾಡಲಾಗಿದೆ.

ಶಿಲಾಯುಗ ಸಂಸ್ಕೃತಿಯ ಹಂತವನ್ನು ಅವಶೇಷ ಹಾಗೂ ಅವುಗಳ ಬೆಳವಣಿಗೆ ಮತ್ತು ಕುಶಲತೆಯನ್ನನುಸರಿಸಿ ಹಳೆಶಿಲಾಯುಗ ಸಂಸ್ಕೃತಿ, ಸೂಕ್ಷ್ಮ ಶಿಲಾಯುಗ ಸಂಸ್ಕೃತಿ ಮತ್ತು ನೂತನ ಶಿಲಾಯುಗ ಸಂಸ್ಕೃತಿ ಎಂದು ವರ್ಗೀಕರಿಸಲಾಗಿದೆ. ಹಾಗೆಯೇ ಹಳೆಯ ಶಿಲಾಯುಗವನ್ನು ಆದಿ ಹಳೆಶಿಲಾಯುಗ ಸಂಸ್ಕೃತಿ, ಮಧ್ಯ ಹಳೆಶಿಲಾಯುಗ ಸಂಸ್ಕೃತಿ ಮತ್ತು ಅಂತ್ಯ ಹಳೆಶಿಲಾಯುಗ ಸಂಸ್ಕೃತಿ ಎಂದು ಮೂರು ಭಾಗಗಳಾಗಿ ವಿಭಾಗಿಸಲಾಗಿದೆ. ಅನಂತರ ಲೋಹಯುಗ ಸಂಸ್ಕೃತಿಯ ಆರಂಭದಲ್ಲಿ ಶಿಲೆಯ ಬಳಕೆಯ ಜೊತೆಗೆ ತಾಮ್ರದ ಬಳಕೆಯು ಕಂಡುಬಂದಿದ್ದರಿಂದ ಈ ಹಂತವನ್ನು ಶಿಲಾತಾಮ್ರಯುಗ ಸಂಸ್ಕೃತಿ ಎಂದು ನಂತರದ ಕಬ್ಬಿಣ ಯುಗ ಅಥವಾ ಬೃಹತ್‌ಶಿಲಾಯುಗ ಸಂಸ್ಕೃತಿ ಎಂದು ಕರೆಯಲಾಗಿದೆ. ಕರ್ನಾಟಕದ ಪ್ರಾಗಿತಿಹಾಸದ ಅಧ್ಯಯನವನ್ನು ೧೮೪೨ರಲ್ಲಿ ಪ್ರಿಮ್‌ರೋಸ್‌ರವರು ರಾಯಚೂರಿನ ಲಿಂಗಸೂರು (ಲಿಂಗಸುಗೂರಿ)ನಲ್ಲಿ ತನ್ನ ಕೈತೋಟವನ್ನು ಸ್ವಚ್ಛಗೊಳಿಸುವ ಸಮಯದಲ್ಲಿ ಶಿಲೋಪಕರಣಗಳಾದ ಬಾಣದ ಮೊನೆ ಹಾಗೂ ನೀಳ ಚಕ್ಕೆಗಳು ಸಿಕ್ಕಿ ಆಕಸ್ಮಿಕ ಶೋಧನೆ ಕಾರ್ಯವನ್ನು ಮೊತ್ತ ಮೊದಲಿಗೆ ಪ್ರಾರಂಭಿಸಿದರು.[೧೮] ಇವರ ನಂತರ ರಾಬರ್ಟ್ ಬ್ರೂಸ್‌ಪೂಟ್, ಕರ್ನಲ್ ಮೆಂಕಜಿ, ಎಂ.ಎಚ್.ಕೃಷ್ಣ, ಆರ್. ಶೇಷಾದ್ರಿ, ಎಚ್.ಡಿ. ಸಂಕಾಲಿಯಾ ಹಾಗೂ ಅ.ಸುಂದರ ಅಲ್ಲದೆ ಇನ್ನೂ ಹಲವು ವಿದ್ವಾಂಸರ

ಸರ್ವೇಕ್ಷಣೆಯ ಫಲವಾಗಿ ನೂರಾರು ಶಿಲಾಯುಗ ನೆಲೆಗಳನ್ನು ಬೆಳಕಿಗೆ ತಂದಿದ್ದಾರೆ. ಕರ್ನಾಟಕದ ತುಮಕೂರು ಜಿಲ್ಲೆಯಲ್ಲಿ ಶಿಲಾಯುಗ ಸಂಸ್ಕೃತಿಯ ೨೬೬ ನೆಲೆಗಳು ಕಂಡುಬಂದಿವೆ.[೧೯] ಅದರಲ್ಲಿ ಆದಿ ಹಳೆ ಶಿಲಾಯುಗದ ಸಂಸ್ಕೃತಿಯ ೧೮, ಮಧ್ಯ ಶಿಲಾಸಂಸ್ಕೃತಿಯ ೨೨, ಅಂತ್ಯ ಶಿಲಾಯುಗ ಸಂಸ್ಕೃತಿಯ ೫೦, ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯ ೬೬, ನೂತನ ಶಿಲಾಯುಗ ಸಂಸ್ಕೃತಿಯ ೩೧, ಶಿಲಾತಾಮ್ರಯುಗ ಸಂಸ್ಕೃತಿಯ ೨, ಬೃಹತ್ ಶಿಲಾಯುಗ ಸಂಸ್ಕೃತಿಯ ೩೮ ಮತ್ತು ಆರಂಭ ಕಾಲಕ್ಕೆ ಸೇರಿದ ೧೯ ನೆಲೆಗಳನ್ನು ಪತ್ತೆ ಹಚ್ಚಲಾಗಿದೆ.[೨೦]

ಪ್ರಸ್ತುತ ಅಧ್ಯಯನದ ತುಮಕೂರು ಜಿಲ್ಲೆಯ ತುರುವೇಕೆರೆ ತಾಲೂಕಿನಲ್ಲಿ ಸುಮಾರು ೪ ಶಿಲಾಯುಗ ಸಂಸ್ಕೃತಿಯ ನೆಲೆಗಳು ಪತ್ತೆಯಾಗಿವೆ. ಅವುಗಳು ಕೆಳಕಂಡಂತಿವೆ.

**ಆದಿ ಹಳೆಶಿಲಾಯುಗದ ಸಂಸ್ಕೃತಿ:**

ತುರುವೇಕೆರೆ ಪರಿಸರದಲ್ಲಿ ಕಿಬ್ಬನಹಳ್ಳಿ, ಬಾಣಸಂದ್ರ ಮತ್ತು ಬೊಮ್ಮೇನಹಳ್ಳಿ ಇವು ಆದಿ ಹಳೆ ಶಿಲಾಯುಗ ಸಂಸ್ಕೃತಿಯ ಪ್ರಮುಖ ನೆಲೆಗಳಾಗಿವೆ. ಕಿಬ್ಬನಹಳ್ಳಿ ದಕ್ಷಿಣ ಕರ್ನಾಟಕದಲ್ಲಿ ಹೆಚ್ಚು ಪ್ರಸಿದ್ಧವಾದ ಆದಿ ಹಳೆಶಿಲಾಯುಗದ ನೆಲೆಯಾಗಿದೆ. ಇದನ್ನು ೧೮೭೪ರಲ್ಲಿ ಸಂಪತ್ ಐಯ್ಯಂಗರ್ ಬೆಳಕಿಗೆ ತಂದರು.[೨೧] ಈ ನಿವೇಶನವು ಬಾಣಸಂದ್ರ ಬೆಟ್ಟಗಳ ತಪ್ಪಲಿನಲ್ಲಿದೆ. ಈ ಸ್ಥಳಗಳಲ್ಲಿ ಬತ್ತಿ ಹೋಗಿರುವ ಅನೇಕ ಹೊಳೆಗಳಿವೆ. ಈ ಹೊಳೆಗಳ ಮಣ್ಣಿನಲ್ಲಿ ಅನೇಕ ಆಯುಧ ಮತ್ತು ಸಲಕರಣೆಗಳು ದೊರಕಿವೆ. ರೋಸ್ಟ್ರೋಕ್ಯಾರಿನೇಟ್ ಮಾದರಿಯ ಆಯುಧಗಳು ಸಿಕ್ಕಿವೆ.[೨೨] ಬಹುಶಃ ಈ ಆಯುಧಗಳನ್ನು ಬೇರುಗಳನ್ನು ಅಗೆಯಲು ಉಪಯೋಗಿಸುತ್ತಿದ್ದರು. ಕೆಲವು ಚಕ್ರದಂತಹ ಆಯುಧಗಳ ಜೊತೆಗೆ ಒಂದು ವಿಶಿಷ್ಟವಾದ ಕೊಕ್ಕಿನಾಕೃತಿಯ ಉಪಕರಣವು ಇಂಗ್ಲೆಂಡಿನ 'ಕ್ಲ್ಯಾಕ್ಟಾನ್ ಆನ್ ಸಿ' ಯನ್ನು ಹೋಲುತ್ತದೆ. ಅಬ್ಬೆವಿಲ್ಲಿಯನ್ ಮಾದರಿಯ ತಿರುಲುಗಲ್ಲಿನ ಕೈಗೊಡಲಿಗಳು, ಸೀಳುಗತ್ತಿಗಳು, ಹೇರಳವಾಗಿ ಸಿಕ್ಕಿವೆ. ಇವು ತೆಳುವಾಗಿ ಕತ್ತರಿಸುವ ಉಪಕರಣಗಳು ಆಗಿರುವುದರಿಂದ ಬಹುಶಃ ಮರಗಳನ್ನು ಮತ್ತು ಕೊಂಬೆಗಳನ್ನು ಕತ್ತರಿಸುವುದಕ್ಕೆ ಬಳಸುತ್ತಿದ್ದರು. ಕೆಲವು ಅಂಡಾಕಾರದ ಉಪಕರಣಗಳು ಇದ್ದು, ಅಂತ್ಯ ಅಶ್ಯೂಲಿಯನ್ ಮಾದರಿಯನ್ನು ಹೋಲುತ್ತವೆ. ತೆಳುವಾದ ಚಕ್ಕೆ ಉಪಕರಣಗಳಲ್ಲಿ ಅನೇಕ ಕೆರೆಯುವ ಉಪಕರಣಗಳು ದೊರಕಿವೆ. ಬಹುಶಃ ಇವುಗಳನ್ನು ಪ್ರಾಣಿಗಳ ಚರ್ಮವನ್ನು ಕೆರೆಯಲು ಉಪಯೋಗಿಸಿರಬಹುದು. ಟೊಳ್ಳಾದ ಕೆರೆಯುವ ಉಪಕರಣ ಈ ಪ್ರದೇಶದ ಒಂದು ವೈಶಿಷ್ಟ್ಯವಾಗಿದೆ. ಬೊಮ್ಮೇನಹಳ್ಳಿ ಈ ಪರಿಸರದ ಮತ್ತೊಂದು ಆದಿ ಹಳೆ ಶಿಲಾಯುಗದ ನೆಲೆಯಾಗಿದೆ.[೨೩] ಇಲ್ಲಿ ಕ್ವಾರ್ಟ್ಜೈಟ್ ಶಿಲೆಯಿಂದ ಮಾಡಿದ ಉಪಕರಣಗಳು ಸಿಕ್ಕಿವೆ. ಇವುಗಳನ್ನು ಮರವನ್ನು ಕತ್ತರಿಸಲು ಮತ್ತು ಬೇಟೆಯಾಡಲು ಆಯುಧಗಳಾಗಿ ಬಳಸಿರಬೇಕು ಎನ್ನಬಹುದು.

### ಮಧ್ಯ ಹಳೆಶಿಲಾಯುಗ ಸಂಸ್ಕೃತಿ

ಮಧ್ಯ ಹಳೆಶಿಲಾಯುಗ ಸಂಸ್ಕೃತಿಯು ಶಿಲಾಯುಗ ಸಂಸ್ಕೃತಿಯ ಮುಂದುವರೆದ ಭಾಗವಾಗಿದೆ. ಆದಿ ಹಳೆಶಿಲಾಯುಗ ಸಂಸ್ಕೃತಿಯ ಅವಶೇಷಗಳು ದೊರೆತ ಸ್ಥಳದಲ್ಲಿಯೇ ಇವು ಕಂಡುಬಂದಿವೆ. ಕಿಬ್ಬನ ಹಳ್ಳಿ ಮತ್ತು ಬೊಮ್ಮೇನಹಳ್ಳಿ ಸ್ಥಳಗಳಲ್ಲಿ ಜಾಸ್ಪರ್ ಮತ್ತು ಬೆಣಚುಕಲ್ಲಿನ ನೀಳಚಕ್ಕೆ ಮತ್ತು ಸಾಮಾನ್ಯ ಮೊನೆಗಳು ದೊರೆತಿವೆ.[೨೪]

### ಅಂತ್ಯ ಹಳೆಶಿಲಾಯುಗ ಸಂಸ್ಕೃತಿ:

ಪ್ರಾರಂಭದಲ್ಲಿ ಕಿಬ್ಬನಹಳ್ಳಿಯೊಂದೇ ಅಂತ್ಯ ಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದ್ದಿತೆಂದು ಗುರುತಿಸಲ್ಪಟ್ಟಿತ್ತು. ನಂತರ ತುಮಕೂರು ಜಿಲ್ಲೆಯಲ್ಲಿ ಸುಮಾರು ೫೦ ಅಂತ್ಯ ಹಳೆಶಿಲಾಯುಗ ಸಂಸ್ಕೃತಿಯ ನೆಲೆಗಳನ್ನು ಗುರುತಿಸಲಾಗಿದೆ. ಅದರಲ್ಲಿ ತುರುವೇಕೆರೆ ತಾಲೂಕಿನ ಬೊಮ್ಮೇನಹಳ್ಳಿಯಲ್ಲಿ ಬೆಣಚುಕಲ್ಲು ಮತ್ತು ಜಾಸ್ಪರ್ ಶಿಲೆಯಿಂದ ನಿರ್ಮಿಸಿದ ನೀಳಚಕ್ಕೆ, ಮೊನೆ ಮತ್ತು ಹೆರೆ ಚಕ್ಕೆಗಳು ಸಿಕ್ಕಿವೆ.[೨೫]

### ಸೂಕ್ಷ್ಮ ಶಿಲಾಯುಗ ಸಂಸ್ಕೃತಿ:

ಈ ಸಂಸ್ಕೃತಿಯು ಅಂತ್ಯ ಹಳೆ ಶಿಲಾಯುಗದ ನಂತರ ಹಾಗೂ ನೂತನ ಶಿಲಾಯುಗದ ಮುಂಚಿನ ಸಾಂಸ್ಕೃತಿಕ ಹಂತವಾಗಿ ಕಂಡುಬರುತ್ತದೆ. ತುರುವೇಕೆರೆ ಪರಿಸರದ ಸಂಪಿಗೆ ಗ್ರಾಮದಲ್ಲಿ ಬೆಣಚುಕಲ್ಲಿನಿಂದ ರಚನೆಯಾದ ನೀಳಚಕ್ಕೆ, ಮೊನೆ ಹೆರೆಚಕ್ಕೆ ಮತ್ತು ಬಾಣದಮೊನೆ ಉಪಕರಣಗಳು ದೊರಕಿವೆ.[೨೬]

### ನೂತನ ಶಿಲಾಯುಗ ಸಂಸ್ಕೃತಿ:

ಕೆಲವೇ ಸಾವಿರ ವರ್ಷಗಳ ಹಿಂದೆ ಮಾನವ ಒಂದು ಕಡೆ ನೆಲೆಯಾಗಿ ನಿಂತು ಪಶುಪಾಲನೆ ಮತ್ತು ಕೃಷಿ ಚಟುವಟಿಕೆಯಲ್ಲಿ ತೊಡಗಿದನು. ಅದಕ್ಕಾಗಿ ಉಜ್ಜಿ ನಯಗೊಳಿಸಿದ ಉಪಕರಣವನ್ನು ರೂಪಿಸಿಕೊಂಡನು. ಈ ತಾಲೂಕಿನ ಅಂತಹ ಒಂದು ನೆಲೆ ಸಂಪಿಗೆ ಗ್ರಾಮವಾಗಿದೆ. ಇಲ್ಲಿ ಬಳಪದ ಕಲ್ಲಿನಿಂದ ರಚನೆಯಾದ ಉಂಗುರ ಕಲ್ಲುಗಳು ಸಿಕ್ಕಿವೆ.[೨೭]

ಪ್ರಸ್ತುತ ಕ್ಷೇತ್ರ ಕಾರ್ಯದಲ್ಲಿ ಕೈಗೊಂಡ ಸಂದರ್ಭದಲ್ಲಿ ವೀರಸಾಗರ ಕೆರೆಹತ್ತಿರ ವಸತಿ ನೆಲೆ ಪತ್ತೆಯಾಗಿದೆ. ಅಲ್ಲಿರುವ ವಸತಿ ದಿಬ್ಬ ಮತ್ತು ಕೆರೆಗಳ ವಿನ್ಯಾಸದಿಂದ ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆ ಎಂದು ಗುರುತಿಸಬಹುದು. ಈ ಪ್ರದೇಶದಲ್ಲಿ ಆದಿ ಹಳೆಶಿಲಾಯುಗ ಸಂಸ್ಕೃತಿಯ ಹಂತದಿಂದ ನವಶಿಲಾಯುಗ ಸಂಸ್ಕೃತಿಯವರೆಗೂ ಹಲವು ನೆಲೆಗಳು ಮತ್ತು ಉಪಕರಣಗಳು ದೊರಕಿವೆ. ಇದರಿಂದ ಮಾನವನ ಆರಂಭದಿಂದ ಹಿಡಿದು ನಾಗರೀಕನಾದ ಹಂತದವರೆಗಿನ ಬದಲಾವಣೆಗಳನ್ನು ತಿಳಿಯಲು ಸಾಧ್ಯವಾಗಿದೆ.

**ಇತಿಹಾಸ ಕಾಲ:**

ಅಕ್ಷರ ಜ್ಞಾನವಿದ್ದ ಅಥವಾ ರಾಜ ಮಹಾರಾಜರ ಕಾಲವನ್ನು ಇತಿಹಾಸ ಕಾಲ ಎನ್ನುವರು. ಇತಿಹಾಸ ಪ್ರಸಿದ್ಧವಾದ ತುರುವೇಕೆರೆ ತಾಲೂಕಿನಲ್ಲಿ ಅನೇಕ ರಾಜ ಮನೆತನಗಳು ಪರೋಕ್ಷವಾಗಿ ಆಳ್ವಿಕೆ ಮಾಡಿವೆ. ಹಲವಾರು ಪಾಳೆಗಾರರು ಮತ್ತು ಪಾಳೆಯ ಪಟ್ಟುಗಳನ್ನು ನಿರ್ಮಿಸಿ ಪ್ರತ್ಯಕ್ಷವಾಗಿ ಆಡಳಿತ ನಡೆಸಿದವರಾಗಿದ್ದಾರೆ. ಈ ತಾಲೂಕಿನಲ್ಲಿ ದೊರೆಯುವ ಶಾಸನಗಳು, ವೀರಗಲ್ಲುಗಳು ಮತ್ತು ದೇವಾಲಯಗಳನ್ನು ಇಟ್ಟುಕೊಂಡು ತುರುವೇಕೆರೆ ಪರಿಸರದ ರಾಜಕೀಯ ಇತಿಹಾಸವನ್ನು ವಿಶ್ಲೇಷಿಸಲಾಗಿದೆ. ಅಲ್ಲದೆ ಇವರ ಆಳ್ವಿಕೆ ಅವಧಿಯಲ್ಲಿ ನಿರ್ಮಾಣ ಮಾಡಿದ ಕೆರೆಗಳ ಇತಿಹಾಸವನ್ನು ಈ ರೀತಿಯಾಗಿ ಚಿತ್ರಿಸಲಾಗಿದೆ.

ಕೆರೆ ನೀರಾವರಿ ಪದ್ಧತಿಯ ಬಗ್ಗೆ ವಿಶ್ವದಾದ್ಯಂತ ಅನೇಕ ಸಂಶೋಧನೆಗಳು ನಡೆಯುತ್ತಲಿವೆ. ಈಜಿಪ್ಟ್ ದೇಶದಲ್ಲಿ ದೊರೆತಿರುವ ರೇಖಾಚಿತ್ರಗಳಲ್ಲಿ ಮಾನವನು ನೀರನ್ನು ಸಂಗ್ರಹಿಸಿ ಬಳಸಿಕೊಂಡಿರುವುದನ್ನು ಚಿತ್ರಿಸಲಾಗಿದೆ. ಇದರಿಂದಾಗಿ ಆ ದೇಶದಲ್ಲಿಯೇ ಮೊಟ್ಟ ಮೊದಲಿಗೆ ಕೆರೆ ನೀರಾವರಿ ಪದ್ಧತಿಯನ್ನು ಬಳಕೆಗೆ ತಂದರೆಂದು ಪುರಾತತ್ವಜ್ಞರು ಅಭಿಪ್ರಾಯಪಡುತ್ತಾರೆ. ಈಜಿಪ್ಟ್‌ನಷ್ಟೆ, ಪ್ರಾಚೀನತೆಯನ್ನು ಹೊಂದಿರುವ ದೇಶವಾದ ಭಾರತದಲ್ಲಿ ಸುಮಾರು ಆರು ಸಾವಿರ ವರ್ಷಗಳಷ್ಟು ಹಿಂದೆಯೇ ಅಂದರೆ ಈಜಿಪ್ಟ್‌ಗೆ ಸಮಕಾಲೀನವಾಗಿ ಕೃಷಿಕ ಜೀವನದ ಕುರುಹುಗಳನ್ನು ನೋಡಬಹುದು. ಇಲ್ಲಿ ಇನ್ನೂ ಪೂರ್ಣ ಪ್ರಮಾಣದಲ್ಲಿ ಅಧ್ಯಯನವಾಗದ ಕಾರಣ ಖಚಿತತೆಯಿಂದ ಹೇಳಲೂ ಸಾಧ್ಯವಾಗದಿದರೂ, ಅಲ್ಲಲ್ಲಿ ದೊರೆತಿರುವ ಪುರಾವೆಗಳ ಆಧಾರದಿಂದ ಭಾರತದಲ್ಲಿ ಆರು ಸಾವಿರ ವರ್ಷಗಳ ಹಿಂದೆಯೇ ಕೃಷಿ ಜೀವನ ಪ್ರಾರಂಭವಾಯಿತು ಎಂದು ಹೇಳಬಹುದು.

ಭಾರತದ ಸಾಹಿತ್ಯ ಕೃತಿಗಳಾದ ರಾಮಾಯಣ, ಮಹಾಭಾರತ, ಕೌಟಿಲ್ಯನ ಅರ್ಥಶಾಸ್ತ್ರ, ಪದ್ಮಪುರಾಣ, ಜಾತಕ ಕಥೆಗಳು, ಶುಕ್ರನ ನೀತಿಸಾರ, ಅಮರಕೋಶ, (ನಾಮಲಿಂಗಾನು ಶಾಸನ), ತುಳು ಸಂಗಮ್ ಸಾಹಿತ್ಯಗಳು ಸಹ ಕೆರೆ ನೀರಾವರಿಯ ಅನೇಕ ವಿಚಾರಗಳನ್ನು ಕುರಿತು ಪ್ರಸ್ತಾಪಿಸಿವೆ.[೨೮] ಹಾಗೆಯೇ ವಿಜಯನಗರ ಸಾಮ್ರಾಜ್ಯದ ಸಾಮ್ರಟನಾದ ಕೃಷ್ಣದೇವರಾಯನು ತನ್ನ 'ಆಮುಕ್ತ ಮಾಲ್ಯ' ಕೃತಿಯಲ್ಲಿ ಕೆರೆ ಕಾಲುವೆಗಳನ್ನು ಕಟ್ಟಿಸುವುದರಿಂದ ಕೇವಲ ಪಾರಮಾರ್ಥ ಸಾಧನೆಯಲ್ಲಿ ಲೌಕಿಕ ಅರ್ಥ ಸಾಧನೆಯೂ ಆಗುತ್ತದೆ ಎಂದು ಹೇಳಿದ್ದಾನೆ.[೨೯]

ಕರ್ನಾಟಕದಲ್ಲಿ ಕೆರೆ ನೀರಾವರಿ ಪದ್ಧತಿಯು ಇತಿಹಾಸ ಪೂರ್ವ ಕಾಲದ ಮಾನವನಿಂದಲೂ ಬೆಳೆದುಬಂದವು. ಪ್ರಾಗೈತಿಹಾಸಿಕ ಕಾಲದ ಮಾನವ ತನ್ನ ವಾಸಕ್ಕಾಗಿ ಗುರುತಿಸಿಕೊಂಡ ನೆಲೆಗಳು, ನೀರು ಸಿಗುವಂತಹ ನೈಸರ್ಗಿಕ ತಾಣಗಳೇ ಆಗಿದ್ದವು. ಕೃಷಿಯನ್ನು ತನ್ನ ಮುಖ್ಯ

ಜೀವನಾಧಾರವಾಗಿ ರೂಢಿಸಿಕೊಂಡ ದಿನದಿಂದಲೇ ಮಳೆಯ ಮತ್ತು ಹೊಳೆಯ ನೀರನ್ನು ಸಂಗ್ರಹಿಸಿಕೊಂಡು ತನ್ನ ಅಸ್ತಿತ್ವಕ್ಕೆ ತಕ್ಕಂತೆ ಬಳಸಿಕೊಳ್ಳಲು ಮಾಡಿಕೊಂಡ ಪ್ರಯತ್ನಗಳ ಫಲವೇ ಕೆರೆಗಳು. ಹೀಗೆ ಕೆರೆ ನಿರ್ಮಾಣ ಕಲೆ ಮಾನವನಲ್ಲಿ ಆರಂಭವಾದ ಅಂದಿನಿಂದ ಇಂದಿನವರೆಗೆ ವಿವಿಧ ರಾಜಮನೆತನಕ್ಕೆ ಸೇರಿದ ದೊರೆಗಳು ಕೆರೆಗಳ ನಿರ್ಮಾಣಕ್ಕೆ ಉತ್ತೇಜನವನ್ನು ನೀಡಿ ಕೃಷಿಯನ್ನು ವಿಸ್ತರಿಸಿದರು.

ಮೌರ್ಯರ ಕಾಲದ ವೇಳೆಗೆ ಕೆರೆ ನಿರ್ಮಾಣ ಶ್ರೇಷ್ಠತೆಯನ್ನು ಪಡೆದಿತ್ತು. ಉದಾ: ಸೌರಾಷ್ಟ್ರದ ಜುನಾಗಡದ ಸುದರ್ಶನ ಸರೋವರ, ಇದನ್ನು ಚಂದ್ರಗುಪ್ತ ಮೌರ್ಯರ ರಾಜ್ಯಪಾಲ ಪುಷ್ಯಗುಪ್ತ ಕಟ್ಟಿಸಿದನು.[೩೦] ಅಶೋಕನ ರಾಜ್ಯಪಾಲ ತುಷಸ್ಪ ಅದಕ್ಕೆ ಕಾಲುವೆಯನ್ನು ಕಟ್ಟಿಸಿದ. ಶಕವಂಶದ ರುದ್ರದಾಮನ ಕಾಲದಲ್ಲಿ ಭಾರೀ ಬಿರುಗಾಳಿ ಎದ್ದು, ಆ ಕೆರೆಯ ಏರೀ ಒಡೆಯಿತು. ಸುದರ್ಶನ ದುದರ್ಶನ ಆಯಿತು. ರುದ್ರದಾಮ ಸುದರ್ಶನ ಸರೋವರವನ್ನು ರಿಪೇರಿ ಮಾಡಿಸಿದ. ಇದನ್ನು ತನ್ನ ಸ್ವಂತ ಹಣದಿಂದ ಮಾಡಿಸಿದುದಾಗಿ ಹೇಳಿಕೊಂಡಿದ್ದಾನೆ. ಈ ಅಣೆಕಟ್ಟಿನ ಇತಿಹಾಸ ಮೌರ್ಯರಿಂದ ಹಿಡಿದು ಗುಪ್ತರ ಕಾಲದವರೆಗೆ ಹರಡಿಕೊಂಡಿದೆ. ಹೀಗೆ ೭೫೦ ವರ್ಷಕ್ಕೆ ಹೆಚ್ಚು ಕಾಲ ನಿಲ್ಲುವಂತಹ ಜಲಾಶಯಗಳನ್ನು ಮೌರ್ಯರು ನಿರ್ಮಿಸಿದ್ದರು ಎಂಬುದಕ್ಕೆ ಸಾಕ್ಷಿಯಾಗಿದೆ.

**ಗಂಗರು:**

ದಕ್ಷಿಣ ಕರ್ನಾಟಕದ ಕೆಲವು ಭಾಗಗಳನ್ನು ಗಂಗರು ಸುಮಾರು ೫ನೇ ಶತಮಾನದಿಂದ ೧೧ನೇ ಶತಮಾನದವರೆಗೂ ಆಳಿದರು. ತುಮಕೂರು ಜಿಲ್ಲೆಯ ಬಹುಭಾಗಗಳು ಅವರ ಅಧೀನಕ್ಕೆ ಒಳಪಟ್ಟಿದ್ದವು. ಈ ಜಿಲ್ಲೆಯಲ್ಲಿ ಇವರ ಕಾಲದ ೪ ತಾಮ್ರ ಶಾಸನಗಳು ಸಂಸ್ಕೃತದಲ್ಲಿ ಬರೆಯಲ್ಪಟ್ಟಿವೆ. ದಾಕ್ಷಿಣಾತ್ಯ ಲಿಪಿಯಲ್ಲಿವೆ.[೩೧] ಇವರು ತಮ್ಮ ಆಳ್ವಿಕೆಯ ಅವಧಿಯಲ್ಲಿ ಕೆರೆ ನಿರ್ಮಾಣಕ್ಕೆ ಉತ್ತೇಜನವನ್ನು  ನೀಡಿದ್ದರು. ಗಂಗರ ದೊರೆ ರಾಚಮಲ್ಲನ ಶಾಸನ[೩೨] ತಿಪಟೂರು ತಾಲೂಕಿನ ಕೆರೆಗೋಡಿ ರಂಗಾ ಪುರದಲ್ಲಿ ದೊರಕಿದ್ದು, ಅದು ಅಲ್ಲಿ ೫ ಕೆರೆ ಇದ್ದುದನ್ನು ಸೂಚಿಸುತ್ತದೆ. ರಾಷ್ಟ್ರಕೂಟರು ಅವರ ಸಾಮಂತರಾದ ಚಾಲುಕ್ಯರು ಮತ್ತು ಗಂಗರಿಂದ ಕೆರೆ ನಿರ್ಮಾಣ ಇನ್ನೂ ಹೆಚ್ಚಾಯಿತೆಂದು ಅವರ ಶಾಸನಗಳು ಸಮರ್ಥಿಸುತ್ತವೆ.

ಉದಾ: ತುಮಕೂರು ಜಿಲ್ಲೆಯ ಸಿರಾ ತಾಲೂಕಿನ ಬರಗೂರು ಶಾಸನ (ಕ್ರಿ.ಶ. ೯೨೦) ನಾರಣಬ್ಬೆ ಎಂಬ ಹೆಂಗಸು ಕೆರೆ ಕಟ್ಟಿಸಿದ್ದನ್ನು ದಾಖಲು ಮಾಡಿದೆ. ಕ್ರಿ.ಶ.೯೫೫ರ ಶಾಸನವು[೩೩] ತುಮಕೂರು ಕೆರೆಯ ಕೆಳಗೆ ಕೆಲವು ಜಮೀನುಗಳನ್ನು ದಾನ ಮಾಡಿದ್ದನ್ನು ದಾಖಲಿಸುತ್ತದೆ. ಗಂಗರಿಗೆ ಸಂಬಂಧಿಸಿದ ಯಾವುದೇ ಶಾಸನಗಳು ತುರುವೇಕೆರೆ ಪರಿಸರದಲ್ಲಿ ದೊರಕಿಲ್ಲವಾದರೂ

ಇಲ್ಲಿಗೆ ಸಮೀಪದಲ್ಲಿರುವ ಕಿಬ್ಬನಹಳ್ಳಿಯ ೧೦೩ನೇ ಶಾಸನವು[೩೪] ಗಂಗರಸದ ಪ್ರಾಬಲ್ಯ ಮತ್ತು ನೊಳಂಬರ ಅವನತಿಯನ್ನು ಸೂಚಿಸುತ್ತದೆ. ಸತ್ಯವಾಕ್ಯನೆಂಬ ಗಂಗದೊರೆ ನೊಳಂಬರ ಮೇಲೆ ಪ್ರಭುತ್ವ ಪಡೆದು 'ನೊಳಂಬ ಕುಲಾಂತಕ' ಎಂಬ ಬಿರುದು ಪಡೆದನೆಂದು ತಿಳಿಸುತ್ತದೆ. ಈ ಆಧಾರಗಳ ಹಿನ್ನೆಲೆಯಲ್ಲಿ ತುರುವೇಕೆರೆ ಪ್ರದೇಶವು ತಲಕಾಡಿನ ಗಂಗರ ಅಧೀನಕ್ಕೊಳಪಟ್ಟ ಪ್ರದೇಶವಾಗಿತ್ತೆಂದು ಹೇಳಬಹುದು.

**ರಾಷ್ಟ್ರಕೂಟರು:**

ಕ್ರಿ.ಶ. ೬ನೇ ಶತಮಾನದ ಮಧ್ಯಭಾಗದಿಂದ ೮ನೇ ಶತಮಾನದ ಮಧ್ಯಭಾಗದವರೆಗೆ ದಖನ್ನಿನಲ್ಲಿ ಆಳ್ವಿಕೆ ಮಾಡಿದ ಬಾದಾಮಿ ಚಾಲುಕ್ಯರಿಗೆ ಸಂಬಂಧಿಸಿದಂತೆ ಯಾವುದೇ ದಾಖಲೆಗಳು ಈ ಜಿಲ್ಲೆಯಲ್ಲಿ ದೊರಕಿಲ್ಲ. ಬಾದಾಮಿ ಚಾಲುಕ್ಯರ ಉತ್ತರಾಧಿಕಾರಿಗಳಾಗಿ ರಾಷ್ಟ್ರಕೂಟರು ಕ್ರಿ.ಶ. ೭೫೩ರಿಂದ ೯೭೩ರವರೆಗೆ ಕರ್ನಾಟಕದ ಅನೇಕ ಭಾಗಗಳಲ್ಲಿ ಆಡಳಿತ ನಡೆಸಿದರು. ಇವರು ತಮ್ಮ ಆಳ್ವಿಕೆಯ ಅವಧಿಯಲ್ಲಿ ಅನೇಕ ಕೆರೆಗಳನ್ನು ಕಟ್ಟಲು ಪ್ರೋತ್ಸಾಹವಿತ್ತರು. ಬಿಜಾಪುರ ಜಿಲ್ಲೆಯ ಹುನಗುಂದ ತಾಲೂಕಿನ ಕೇಸರಭಾವಿ ಶಾಸನ ಕ್ರಿ.ಶ. ೮೩೭ರಲ್ಲಿ ಅಮೋಘವರ್ಷನಿಂದ ಅಥವಾ ಅವನ ಆಳ್ವಿಕೆಯಲ್ಲಿ ಒಂದು ಕೆರೆ ಮತ್ತು ಅದರ ತೂಬು ಕಟ್ಟಿಸಿದ್ದನ್ನು ದಾಖಲಿಸುತ್ತದೆ.[೩೫] ಅದೇ ರಾಜನ ಆಳ್ವಿಕೆಯಲ್ಲಿ ಕ್ರಿ.ಶ. ೮೬೨ರ ಬಾಗೇವಾಡಿ ತಾಲೂಕಿನ ಹೂವಿನ ಹಿಪ್ಪರಗಿ ಶಾಸನ.[೩೬] ಎರಡು ಕೆರೆಗಳು ಇದ್ದುದನ್ನು ದಾಖಲೆ ಮಾಡಿದೆ. ತುಮಕೂರು ಜಿಲ್ಲೆಯಲ್ಲಿ ರಾಷ್ಟ್ರಕೂಟರಿಗೆ ಸಂಬಂಧಿಸಿದಂತೆ ೨ ಶಾಸನಗಳು ದೊರಕಿವೆ. ಒಂದು ತಾಮ್ರ ಶಾಸನ ಮತ್ತೊಂದು ಶಿಲಾಶಾಸನವಾಗಿದೆ. ಕಡಬದಲ್ಲಿ ದೊರೆತ ತಾಮ್ರಶಾಸನ ಕಾಲ ಕ್ರಿ.ಶ. ೮೧೨. ಚಿಕ್ಕ ಸಾರಂಗಿ ಶಾಸನದ ಕಾಲದ ಕ್ರಿ.ಶ. ೯೦೩ ಆಗಿದೆ.[೩೭] ಇವೆರಡು ಶಾಸನಗಳು ರಾಷ್ಟ್ರಕೂಟರಿಗೆ ಸಂಬಂಧಿಸಿದವುಗಳಾಗಿವೆ.

ತುರುವೇಕೆರೆ ತಾಲೂಕನ್ನು ಶಾತವಾಹನರು ಆಳುತ್ತಿದ್ದು ನಂತರ ಮಾನ್ಯಖೇಟದ ರಾಷ್ಟ್ರಕೂಟರ ಆಳ್ವಿಕೆಗೆ ಒಳಪಟ್ಟಿತೆಂದು ತಿಳಿದು ಬಂದಿದೆ.[೩೮] ಆ ಅವಧಿಯಲ್ಲಿ ತುರುವೇಕೆರೆಯಲ್ಲಿ ಅಚಲಾನಂದರೆಂಬ ದಾಸರು ಇದ್ದು, ದಾಸ ಪಂಥವನ್ನು ಅಪಾರವಾಗಿ ಬೆಳೆಸಿ ೧೨ ಗ್ರಾಮಗಳನ್ನು ಜಹಂಗೀರಾಗಿ ನೀಡಿದರು. ನಂತರ ಹಾಗಲವಾಡಿ ಪಾಳೆಗಾರ ಅಧೀನಕ್ಕೆ ಈ ಪ್ರದೇಶವು ಒಳಪಟ್ಟಾಗ ಈ ಜಹಂಗೀರನ್ನು ದಾಸ ಪಂಥದವರಿಂದ ಕಿತ್ತುಕೊಳ್ಳಲಾಯಿತು. ನಂತರ ದಾಸ ಪಂಥದವರು ವಿಠಲ ವಿಗ್ರಹವನ್ನು ತುರುವೇಕೆರೆಗೆ ನೈರುತ್ಯ ದಿಕ್ಕಿನಲ್ಲಿರುವ ವಿಠಲ ದೇವರ ಹಳ್ಳಿಯಲ್ಲಿ ಪ್ರತಿಷ್ಠಾಪಿಸಿ ಅಲ್ಲಿಯೇ ನೆಲೆಸಿದರು ಎಂಬುದಾಗಿ ತಿಳಿದುಬಂದಿದೆ.[೩೯] ಇವರ ಕಾಲಕ್ಕೆ ಸಂಬಂಧಿಸಿದ ಶಾಸನಗಳು ಈ ಪರಿಸರದಲ್ಲಿ ಕಂಡುಬಂದಿಲ್ಲ.

## ಕಲ್ಯಾಣ ಚಾಲುಕ್ಯರು

೧೦ನೇ ಶತಮಾನದಿಂದ ೧೪ನೇ ಶತಮಾನದವರೆಗೂ ಸುಮಾರು ೩೫೦ ವರ್ಷಗಳು ಕೆರೆ ನಿರ್ಮಾಣ ಸ್ವರ್ಣಯುಗವಾಗಿದೆ. ಆ ಕಾಲದಲ್ಲಿ ವಿದ್ವಾಂಸರು ನೆಲೆಸುವುದಕ್ಕಾಗಿ ಅಸಂಖ್ಯಾತ ಹೊಸ ಹಳ್ಳಿಗಳನ್ನು ಕಟ್ಟುವುದು, ಅಗ್ರಹಾರಗಳನ್ನು ನಿರ್ಮಿಸುವುದು, ಅಲ್ಲಿ ವಿಶ್ರಾಂತಿ ಗೃಹಗಳನ್ನು ಹಾಗೂ ದೇವಸ್ಥಾನಗಳನ್ನು ಕಟ್ಟುವುದು, ಇವೆಲ್ಲವೂ ಕಲ್ಯಾಣ ಚಾಲುಕ್ಯರ ಪ್ರಮುಖ ಕಾರ್ಯಗಳಾಗಿವೆ.[೪೦] ವಾಸ್ತವಿಕವಾಗಿ ಒಂದು ಹಳ್ಳಿ ಕಟ್ಟಿದಾಗ ನೀರು ಸರಬರಾಜು ಮಾಡಲು ಹತ್ತಿರದಲ್ಲಿ ನದಿ ಇಲ್ಲದಿದ್ದಲ್ಲಿ ಆ ಹಳ್ಳಿಯಲ್ಲಿ ಕೆರೆ ಕಟ್ಟಿ ಮುಗಿಸಿದ ನಂತರ ಕೃತಜ್ಞತೆಯ ರೂಪದಲ್ಲಿ ಒಂದು ಗುಡಿಯನ್ನು ಕೆರೆ ಹತ್ತಿರ ಕಟ್ಟಲಾಗುತ್ತಿತ್ತು. ಕೆಲವೊಮ್ಮೆ ಕೆರೆ ಒಡೆದಾಗ ಅದರ ದುರಸ್ಥಿಗೆ ದೇವಾಲಯದ ನಿಧಿಯನ್ನು ಬಳಸಲಾಗುತ್ತಿತ್ತು. ಇದರ ಉಸ್ತುವಾರಿಯನ್ನು ಗ್ರಾಮಸಭೆ ಮಾಡುತ್ತಿತ್ತು. ಗಾವುಂಡರು ಅದರ ಮುಂದಾಳತ್ವ ವಹಿಸುತ್ತಿದ್ದರು. ಈ ಯುಗದಲ್ಲಿ ನೀರಾವರಿ ಸೌಲಭ್ಯಗಳ ನಿರ್ಮಾಣ ಹಾಗೂ ಸಂರಕ್ಷಣೆಯಲ್ಲಿ ಜನತೆಯ ಪಾತ್ರ ಅತ್ಯುನ್ನತ ಮಟ್ಟದಲ್ಲಿತ್ತು.

ಕಲ್ಯಾಣ ಚಾಲುಕ್ಯರು ತುಮಕೂರು ಜಿಲ್ಲೆಯ ವಿವಿಧ ಭಾಗಗಳಲ್ಲಿ ಆಳಿದರು. ಇವರ ಕಾಲಕ್ಕೆ ಸಂಬಂಧಿಸಿದಂತೆ ಕೆಲವು ಶಾಸನಗಳು ದೊರತಿವೆ. ಅವುಗಳಲ್ಲಿ ತುರುವೇಕೆರೆ ಪರಿಸರದ ತಂಡಗ ಗ್ರಾಮದ ಕ್ರಿ.ಶ. ೧೧೪೯ರ[೪೧] ಪೆರ್ಮಾಡಿ ದೇವನ (ಜಗದೇಕ ಮಲ್ಲನ) ಶಾಸನದಲ್ಲಿ ಮಾಚರಸನು ತಂಡಗದ ಮೂಲ ಸ್ಥಾನದ ಅಮೃತರಾಶಿ ದೇವರ ಕಾಲು ತೊಳೆದು ೩ ಖಂಡುಗ ಗದ್ದೆ ಮತ್ತು ಬೆದ್ದಲು ಬಿಟ್ಟ ವಿವರವಿದೆ. ಇದು ಕಲ್ಯಾಣ ಚಾಲುಕ್ಯರ ಕಾಲದ ಒಂದು ಧಾರ್ಮಿಕ ಶಾಸನ ಎಂಬುದಾಗಿ ತಿಳಿದುಬಂದಿದೆ. ಈ ಮನೆತನದ ರಾಜರುಗಳು ಬಿರುದುಗಳಿಂದಲೇ ಪ್ರಸಿದ್ಧರಾಗಿದ್ದಾರೆ. ಇದರಿಂದ ಚಾಲುಕ್ಯ ರಾಜರ ನಿರ್ಧಾರಿತ ಕಾಲವನ್ನು ತಿಳಿಯಲು ಕಷ್ಟಸಾಧ್ಯ.

## ಚೋಳರು

ಕ್ರಿ.ಶ. ೧೧ನೇ ಶತಮಾನದಲ್ಲಿ ಚೋಳರ ಪ್ರಾಬಲ್ಯವು ದಕ್ಷಿಣ ರಾಜ್ಯಗಳಲ್ಲಿ ಕಂಡುಬಂದಿದೆ. ಕ್ರಿ.ಶ. ೧೦೦೦ ರಿಂದ ಕ್ರಿ.ಶ. ೧೦೭೦ರವರೆಗೂ ಅಂದರೆ ಹೊಯ್ಸಳ ಸಾಮ್ರಾಜ್ಯ ಪ್ರಬಲವಾಗುವವರೆಗೂ ಚೋಳರು ಆಳ್ವಿಕೆ ನಡೆಸಿದರು. ಇವರ ಆಡಳಿತ ಕಾಲದಲ್ಲಿ ಕೆರೆ ನೀರಾವರಿ ಪದ್ಧತಿ ಬೆಳವಣಿಗೆ ಹೊಂದಿತ್ತು. ಉದಾಹರಣೆಗೆ ಕೋಲಾರ ಜಿಲ್ಲೆಯ ಕ್ರಿ.ಶ. ೧೦೦೦ ಹೆಬ್ಬಣಿ[೪೨] ಶಾಸನ ಒಂದು ಕೆರೆ ಒಡೆದದ್ದನ್ನು ಒಬ್ಬ ಗಾವುಂಡ ಅದನ್ನು ದುರಸ್ತಿ ಮಾಡಿದ್ದನ್ನು ಪ್ರಸ್ತಾಪಿಸುತ್ತದೆ. ಚೋಳರು ಚಾಲುಕ್ಯರೊಂದಿಗೆ ಯುದ್ಧ ಮಾಡಿ ಜಯಗಳಿಸಿದರು. ರಾಜ ಕುಲೋತ್ತುಂಗ ಚೋಳನ ಕಾಲದಲ್ಲಿ ಕ್ರಿ.ಶ. ೧೧೧೬ರಲ್ಲಿ ಹೊಯ್ಸಳ ವಿಷ್ಣುವರ್ಧನ

ಗಂಗವಾಡಿಯನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡುದರಿಂದ ಕರ್ನಾಟಕದಲ್ಲಿ ಚೋಳರ ಆಳ್ವಿಕೆ ಕೊನೆಗೊಂಡಿತು. ನಂತರ ಕೆರೆ ನೀರಾವರಿ ಬೆಳವಣಿಗೆ ಹೊಯ್ಸಳ ಕಾಲಕ್ಕೆ ಸಂಬಂಧಿಸಿವೆ. ತುಮಕೂರು ಜಿಲ್ಲೆಯ ತುರುವೇಕೆರೆ ಪರಿಸರದಲ್ಲಿ ಚೋಳರ ಕಾಲಕ್ಕೆ ಸಂಬಂಧಿಸಿದ ಯಾವುದೇ ದಾಖಲೆಗಳು ದೊರೆಕಿಲ್ಲ ಎನ್ನಬಹುದು.

**ಹೊಯ್ಸಳರು**

೧೧ನೇ ಶತಮಾನದ ಕೊನೆಯಿಂದ ಸುಮಾರು ೧೪ನೇ ಶತಮಾನದ ಮಧ್ಯದವರೆಗೂ ದಕ್ಷಿಣ ಕರ್ನಾಟಕದಲ್ಲಿ ಹೊಯ್ಸಳರು ಆಡಳಿತ ನಡೆಸಿದರು. ಇವರು ತಮ್ಮ ಆಳ್ವಿಕೆಯ ಅವಧಿಯಲ್ಲಿ ನೀರಾವರಿ ಕಾರ್ಯಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಿ ಅತ್ಯಂತ ಶ್ರೇಷ್ಠ ಕೆರೆಯ ನಿರ್ಮಾಪಕರು ಎನಿಸಿಕೊಂಡಿದ್ದಾರೆ. ತುರುವೇಕೆರೆ ತಾಲೂಕಿನಲ್ಲಿ ಹೊಯ್ಸಳ ಕಾಲದ ಕೆಲವು ಶಾಸನಗಳು, ದೇವಾಲಯಗಳು ವೀರಗಲ್ಲುಗಳು ಮತ್ತು ಕೆರೆಗಳು ಕಂಡುಬಂದಿವೆ. ಈ ತಾಲೂಕಿಗೆ ಸಂಬಂಧಿಸಿದಂತೆ ತಂಡಗ ಬೆಂಕಿಕೆರೆ, ಕೊಂಡಜ್ಜಿ, ಜಡೆಯ ಮತ್ತು ತುರುವೇಕೆರೆ ಮುಂತಾದ ಕೆಲವು ಗ್ರಾಮಗಳಲ್ಲಿ ಹೊಯ್ಸಳರ ಕಾಲದ ಶಾಸನಗಳು ದೊರೆತಿವೆ. ಅವುಗಳಲ್ಲಿ ತಂಡಗ ಗ್ರಾಮದ ಕ್ರಿ.ಶ. ೧೧೦೨ರ ಹೊಯ್ಸಳರ ಕಾಲದ ಶಾಸನದಲ್ಲಿ[೪೩] ಭೀಮಣ್ಣನು ಮೂಲ ದೇವರ ನಿತ್ಯ ನೈವೇಧ್ಯಕ್ಕೋಸ್ಕರ ಕಾರು ಕೆರೆಯ ಕೆಳಗಿನ ಭೂಮಿಯನ್ನು ದಾನ ನೀಡಿದ ವಿವರವಿದೆ. ಈ ಕಾಲದ ಶಾಸನದಲ್ಲಿ[೪೪] ತಂಡಗವನ್ನು "ಸಂಕರ ನಾರಾಯಣಪುರ" ಎಂಬ ಅಗ್ರಹಾರವನ್ನಾಗಿ ಮಾಡಿದ ಉಲ್ಲೇಖವಿದ್ದು, ನಂತರ ಅಲ್ಲಿನ ತುರುಗಳನ್ನು ಕಳ್ಳರಿಂದ ಬಿಡಿಸಿಕೊಂಡು ಬರುವಾಗ ಅವರೊಡನೆ ಹೋರಾಡಿ ಕೊಂದು ತಾನು ಸತ್ತ ಆ ವ್ಯಕ್ತಿಯ ಹೆಂಡತಿ ಪರೋಕ್ಷ ವಿನಯವಾಗಿ ವೀರಗಲ್ಲು ಮಾಡಿಸಿದ್ದನ್ನು ವಿವರಿಸುತ್ತದೆ. ಅನಂತರ ೨ನೇ ನರಸಿಂಹನ (ಕ್ರಿ.ಶ. ೧೨೨೦-೧೨೩೮) ಕಾಲಕ್ಕೆ ಸಂಬಂಧಿಸಿದ ಗುಬ್ಬಿ ಶಾಸನದಲ್ಲಿ[೪೫] ನಿಟ್ಟೂರಿನ ಮಹಾವಡ್ಡ ವ್ಯವಹಾರಿ ಮತ್ತು ಪಟ್ಟಣಸ್ವಾಮಿ ಇವರು ನಿರ್ಮಿಸಿದ ಹಿರಿಯ ಕೆರೆಯ ಕೆಳಗಿನ ಭೂಮಿಯನ್ನು ಸಂಪಿಗೆಯ ಮಲ್ಲಿಕಾರ್ಜುನ ದೇವಾಲಯಕ್ಕೆ ದಾನ ನೀಡಿದ ವಿವರವಿದೆ. ಕೊಂಡಜ್ಜಿ ಗ್ರಾಮವು ಹೊಯ್ಸಳರ ವೀರ ಸೋಮೇಶ್ವರನ ಆಳ್ವಿಕೆಗೆ ಒಳಪಟ್ಟಿತ್ತು ಎಂದು ಅಲ್ಲಿ ದೊರೆತ ಕ್ರಿ.ಶ.೧೨೪೫ರ ಶಾಸನವು[೪೬] ತಿಳಿಸುತ್ತದೆ.

ತುರುವೇಕೆರೆಯ ಕ್ರಿ.ಶ. ೧೨೬೩ರ ಶಾಸನದಲ್ಲಿ[೪೭] ೩ನೇ ನರಸಿಂಹನ ಹೆಸರಾಂತ ಮತ್ತು ರಕ್ಷಣಾ ಮಂತ್ರಿಯಾಗಿದ್ದ ಸೋವಣ ದಣಾಯಕನು ತುರುವೇಕೆರೆಯನ್ನು ೯೬ ವಿಭಾಗಗಳನ್ನು ಒಳಗೊಂಡ ಸರ್ವಜ್ಞ ವಿಜಯ ನರಸಿಂಹಪುರ ಎಂಬ ಅಗ್ರಹಾರವನ್ನಾಗಿ ಮಾಡಿ ಪುರೋಹಿತರಿಗೆ ದಾನ ಕೊಟ್ಟುದಾಗಿ ತಿಳಿದುಬಂದಿದೆ. ಇಲ್ಲಿನ ದೊಡ್ಡ ಕೆರೆಯು ಇವರ ಕಾಲದಲ್ಲಿಯೇ

ನಿರ್ಮಾಣವಾದಂತಿದೆ. ಕ್ರಿ.ಶ. ೧೨೬೩ರ ಅದೇ ಶಾಸನವು[೪೮] ಆ ಊರಿನ ಪ್ರತಿ ಗೃಹಸ್ಥರು ಮಾಳಿಗೆಯನ್ನು ಮಾಡಿಸಲು ಮತ್ತು ಕೆರೆ ಕಟ್ಟಿ, ಬಾವಿಗಳನ್ನು ಕಟ್ಟಲು ಕಲ್ಲು ಹೊಡೆಸಿದಾಗ ಯಾವ ಹೊಲದವರು ಅಡ್ಡಿಪಡಿಸಬಾರದೆಂದು ಆ ಊರಿನ ಮುಖ್ಯಸ್ಥರು ತೀರ್ಮಾನಿಸಿದ್ದಾರೆ ಎಂದು ತಿಳಿಸಿದೆ. ಇದರಿಂದಾಗಿ ಈ ಪರಿಸರದಲ್ಲಿ ಹೊಯ್ಸಳರ ಕಾಲದ ಹೆಚ್ಚಿನ ಕೆರೆಗಳು ಕಂಡುಬಂದಿರಬೇಕು. ಇವರ ಕಾಲದ ಅನೇಕ ದೇವಾಲಯಗಳು ಈ ಸ್ಥಳದಲ್ಲಿ ಇವೆ.

ಉದಾಹರಣೆಗೆ: ತುರುವೇಕೆರೆಯಲ್ಲಿ ಮೂಲ ಶಂಕರೇಶ್ವರ ಮತ್ತು ಚನ್ನಕೇಶವ ದೇವಸ್ಥಾನ, ನಾಗಲಾಪುರದಲ್ಲಿ ಕೇದಾರೇಶ್ವರ ಮತ್ತು ಚನ್ನಕೇಶವ ದೇವಸ್ಥಾನ ಹಾಗೂ ವಿಠಲಾಪುರದಲ್ಲಿ ವಿಠಲ ಅಥವಾ ವೆಂಕಟರಮಣ ಸ್ವಾಮಿ ದೇವಸ್ಥಾನಗಳಿವೆ.

### ವಿಜಯನಗರ ಸಾಮ್ರಾಜ್ಯ

ಹೊಯ್ಸಳರ ಅವನತಿಯ ನಂತರ ತುಮಕೂರು ಜಿಲ್ಲೆಯನ್ನೊಳಗೊಂಡ ಹೊಯ್ಸಳ ರಾಜ್ಯವು ವಿಜಯನಗರ ಸಾಮ್ರಾಜ್ಯದೊಡನೆ ವಿಲೀನವಾಯಿತು. ಈ ಸಾಮ್ರಾಜ್ಯ ಸ್ಥಾಪನೆಯು ದಕ್ಷಿಣ ಭಾರತದಲ್ಲಿ ಒಂದು ನೂತನ ತಿರುವನ್ನೇ ಪಡೆಯಿತು. ಇವರು ತಮ್ಮ ಆಳ್ವಿಕೆಯ ಕಾಲದಲ್ಲಿ ದಕ್ಷಿಣ ಭಾರತವು ಸೇರಿದಂತೆ ಹಲವಾರು ಭಾಗಗಳಲ್ಲಿ ಬೃಹತ್ ನೀರಾವರಿ ಯೋಜನೆಗಳನ್ನು ತಂದರು. ಅವುಗಳಲ್ಲಿ ಮುಖ್ಯವಾಗಿ ಕಾವೇರಿ ಮುಖಜ ಭೂಮಿ ಯೋಜನೆ, ಸೂಳೆಕೆರೆ ಹಾಗೂ ಶಾಂತಿಸಾಗರ ಕೆರೆ ಇವಲ್ಲದೆ ಮದಗ–ಮಾಸೂರು, ಪೊರುಮಾಮಿಲ್ಲ, ಕಂಬಂ ಮತ್ತು ವ್ಯಾಸಸಮುದ್ರಗಳಿಂದ ಬೃಹದಾಕಾರದ ಜಲಾಶಯಗಳನ್ನು ನಿರ್ಮಿಸಿದರು.[೪೯] ಈ ಕಾಲಕ್ಕೆ ಸಂಬಂಧಿಸಿದಂತೆ ತುರುವೇಕೆರೆ ತಾಲೂಕಿನ ದಂಡಿಶಿವರದ ಕ್ರಿ.ಶ. ೧೫೦೭ರ ಶಾಸನವು[೫೦] ಮಹಾಮಂಡಲೇಶ್ವರ ಮಗ ಕೇಶವ್ಯ ದೇವರಸು ಕಲ್ಲುಗಳಿಂದ ಕಟ್ಟೆ ನಿರ್ಮಿಸಿದ ಎಂದು ದಾಖಲಿಸಿದೆ. ಇದೇ ಕಾಲದ ಮತ್ತೊಂದು ಶಾಸನವು ವಿಜಯನಗರದ ಅರಸ ೨ನೇ ಹರಿಹರನ ಕಾಲದಲ್ಲಿ ಬೆನಕನ ಕೆರೆಯನ್ನು 'ಹರಿಹರ ರಾಜಾಧಿರಾಜಪುರಂ' ಎಂಬ ಹೆಸರಿನ ಅಗ್ರಹಾರವನ್ನಾಗಿ ಮಾಡಿ ರಾಜರಿಗೆ ಒಳಿತಾಗಲೆಂದು ದಾನ ನೀಡಿದ ಉಲ್ಲೇಖವಿದೆ.[೫೧] ವಿಜಯನಗರದ ಅರಸರು ತಮ್ಮ ಆಳ್ವಿಕೆಯ ಅವಧಿಯಲ್ಲಿ ಹಲವಾರು ಕೆರೆಗಳನ್ನು ನಿರ್ಮಿಸಿದ್ದಾರೆ ತುರುವೇಕೆರೆಯ ಪರಿಸರದಲ್ಲಿ ಇವರ ಆಳ್ವಿಕೆಯ ಅವಧಿಯಲ್ಲಿ ನಿರ್ಮಾಣವಾದ ಕಟ್ಟೆಗಳ ಬಗ್ಗೆ ಉಲ್ಲೇಖವಾಗಿದೆ.

### ಹಾಗಲವಾಡಿ ನಾಯಕರು

ವಿಜಯನಗರ ಸಾಮ್ರಾಜ್ಯ ಪತನ ನಂತರ ಕರ್ನಾಟಕದಲ್ಲಿ ಆಳ್ವಿಕೆ ಮಾಡಿದ ಸಣ್ಣಪುಟ್ಟ ನಾಯಕರುಗಳು ಕೆರೆ, ದೇವಾಲಯ ನಿರ್ಮಾಣ ಮಾಡಿದ ಕಲ್ಯಾಣ ಕಾರ್ಯಗಳಲ್ಲಿ ಆ ಮಹಾ

ಸಾಮ್ರಾಜ್ಯದ ಪರಂಪರೆಯನ್ನು ಮುಂದುವರೆಸಿದರು. ಹಾಗಲವಾಡಿ ನಾಯಕರ ಅನುಮತಿಯ ಮೇರೆಗೆ ಕೇಶವಯ್ಯ ದೇವ ಅರಸರುಗಳು ದಂಡಿಶಿವರ ಹೋಬಳಿಯಲ್ಲಿ ಕಟ್ಟೆ ಕೆರೆಯನ್ನು ನಿರ್ಮಿಸಿದರು.[೫೨] ಹಾಗಲವಾಡಿನಾಯಕ ರಾಮಪ್ಪನಾಯಕನು ಹಾಗಲವಾಡಿಯಲ್ಲಿ ಕೆರೆಯನ್ನು ಕಟ್ಟಿಸಿದನು.[೫೩] ಅವನ ಹೆಂಡತಿ ಕಲ್ಲಮ್ಮವ್ವ ಎಂಬುವಳು ಗಳಿಗಕೆರೆ ಎಂಬಲ್ಲಿ ಕೆರೆಯೊಂದನ್ನು ಕಟ್ಟಿಸಿದಳು.[೫೪] ತುರುವೇಕೆರೆಯನ್ನು ಹಾಗಲವಾಡಿ ಪಾಳಗರನಾದ ಸಾಲನಾಯಕನು ೧೬ನೇ ಶತಮಾನದಲ್ಲಿ ವಶಪಡಿಸಿಕೊಂಡನು. ನಂತರ ತನ್ನ ಸೋದರನಾದ ಚಿಕ್ಕನಾಯಕ ಮತ್ತು ಅಣ್ಣೆನಾಯಕನ ವಶಕ್ಕೆ ಕೊಟ್ಟನು. ಅವರು ಕೋಟೆ ಕಟ್ಟಿಸಿ, ಕೆರೆಯನ್ನು ವಿಸ್ತರಿಸಿ ಅನೇಕ ಸುಧಾರಣೆಗಳನ್ನು ಮಾಡಿದರು.[೫೫] ಅನಂತರ ಭೈರಪ್ಪನಾಯಕ ಹಿರಿಯ ಮುದಿಯಪ್ಪನಾಯಕ ಮತ್ತು ಇಮ್ಮಡಿ ಭೈರಪ್ಪನಾಯಕ ಹಾಗಲವಾಡಿಯಲ್ಲಿ ಆಡಳಿತ ನಡೆಸುತ್ತಿದ್ದರು. ಇಮ್ಮಡಿ ಭೈರಪ್ಪನಾಯಕನ ಆಳ್ವಿಕೆಯ ಕಾಲದಲ್ಲಿ ರಣಧೀರ ಕಂಠೀರವ ನರಸರಾಜ ಒಡೆಯರು ಶ್ರೀರಂಗ ಪಟ್ಟಣದಲ್ಲಿ ರಾಜ್ಯಭಾರ ಮಾಡುತ್ತಿದ್ದರು. ಇವರು ಕ್ರಿ.ಶ. ೧೬೪೨ರಲ್ಲಿ ಚಿತ್ರಭಾನು ಸಂವತ್ಸರದಲ್ಲಿ ತಮ್ಮ ದಳವಾಯಿಯಾದ ನಂಜರಾಜಯ್ಯ (೧೬೪೦-೧೬೪೭)ನನ್ನು ಹಾಗಲವಾಡಿ ಸೀಮೆಯ ಮೇಲೆ ದಾಳಿ ಮಾಡಲು ಕಳುಹಿಸಿದರು. ಸೋತ ಭೈರಪ್ಪ ನಾಯಕನು ಒಡೆಯರ ಸೇನೆ ಸೇರಿ ತುರುವೇಕೆರೆಯ ಕೋಟೆಗೆ ಮುತ್ತಿಗೆ ಹಾಕಿ ಬಿಜಾಪುರದ ಅಫಜಲ್ ಖಾನ್‌ನಿಂದ ಅದನ್ನು ಗೆದ್ದುಕೊಟ್ಟನು.[೫೬] ಕ್ರಿ.ಶ. ೧೬೪೭ರಲ್ಲಿ ತುರುವೇಕೆರೆಯು ಮೈಸೂರು ಒಡೆಯರ ಅಧೀನವಾಯಿತು. ಇವರ ಆಳ್ವಿಕೆಯ ಬಗ್ಗೆ ಹೆಚ್ಚಿನ ಮಾಹಿತಿ ದೊರೆತಿಲ್ಲ.

ಒಟ್ಟಾರೆಯಾಗಿ ಈ ಮೇಲಿನ ಎಲ್ಲಾ ರಾಜ ಮನೆತನಗಳು ತುರುವೇಕೆರೆ ತಾಲೂಕನ್ನು ಆಳಿದ್ದರೆಂಬುದಕ್ಕೆ ಅವರು ಬಿಟ್ಟು ಹೋಗಿರುವ ಕೆರೆಗಳು, ಶಾಸನಗಳು, ವೀರಗಲ್ಲು ಮತ್ತು ದೇವಾಲಯಗಳಂತಹ ಕುರುಹುಗಳೇ ಸಾಕ್ಷಿಯಾಗಿವೆ.

**ಅಡಿಟಿಪ್ಪಣಿಗಳು:**

೧. ಕನ್ನಡ ವಿಷಯ ವಿಶ್ವಕೋಶ, ೨೦೦೫; ಸಂಪುಟ-೧, ಪು.೧೧೬೧.

೨. ಅದೇ.

೩. ಭೈರಪ್ಪ ಕೆ, ೧೯೯೭; ತುರುವೇಕೆರೆ ತಾಲೂಕು ದರ್ಶನ, ಪು.೩.

೪. ತಾಲೂಕು ಕಛೇರಿಯ ವರದಿ, ೨೦೦೧; ತುರುವೇಕೆರೆ

೫. ಅದೇ.

೬ ಭೈರಪ್ಪ ಕೆ, ಪೂರ್ವೋಕ್ತ, ಪು.೭

೭ ಅದೇ.

೮. ಭಾಸ್ಕರಪ್ಪ ಸಿ.ಎನ್., ೧೯೮೭; ತುಮಕೂರು ಜಿಲ್ಲಾ ದರ್ಶನ, ಪು.೧೪

೯. ಅರಣ್ಯ ಇಲಾಖೆಯ ವರದಿ, ತುರುವೇಕೆರೆ

೧೦. ಅದೇ.

೧೧. ಕೃಷಿ ಇಲಾಖೆಯ ವರದಿ, ೨೦೦೮ ಮತ್ತು ೦೯, ತುರುವೇಕೆರೆ.

೧೨. ಅದೇ.

೧೩. ಸಣ್ಣ ನೀರಾವರಿ ಇಲಾಖೆಯ ವರದಿ, ೨೦೦೯, ತುರುವೇಕೆರೆ.

೧೪. ಭಾಸ್ಕರಪ್ಪ ಸಿ.ಎನ್., ಪೂರ್ವೋಕ್ತ, ಪು.೧೯೩.

೧೫. ಬೇಟರಾಯಸ್ವಾಮಿ ದೇವಾಲಯದ ಬೇಟಿಯ ವರದಿ, ತುರುವೇಕೆರೆ.

೧೬. ಗೋಪಾಲ ಆರ್. (ಸಂ), ೨೦೦೯, ತುಮಕೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು.೪೧೨.

೧೭. ಅದೇ.

೧೮. ಶಿವತಾರಕ್ ಕೆ.ಬಿ., ೨೦೦೧; ಕರ್ನಾಟಕದ ಪುರಾತತ್ವ ನೆಲೆಗಳು, ಪು.೪.

೧೯. ನಂದೀಶ್ವರ ಎನ್., ೨೦೦೮; ಸಿರಾ ತಾಲೂಕು ದರ್ಶನ, ಪು.೧೯.

೨೦. ಕವಿತಾಕೃಷ್ಣ (ಸಂ), ೨೦೦೨; ಜಯಮಂಗಲಿ, ಪು.೬.

೨೧. ಗೋಪಾಲ್ ಆರ್, (ಸಂ), ೨೦೦೮; ಮಂಡ್ಯ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ ಪು.೨೦೮.

೨೨. ಸಂಪದ್ಗಿರಿರಾವ್ ಕೆ. (ಸಂ), ೨೦೦೬; ಕರ್ನಾಟಕದ ಪರಂಪರೆ, ಸಂಪುಟ–೧, ಪು.೧೦೫.

೨೩. ಶಿವತಾರಕ್ ಕೆ.ಬಿ, ಪೂರ್ವೋಕ್ತ, ಪು.೨೯೧.

೨೪. ಅದೇ, ಪು.೨೯೨.

೨೫. ಅದೇ.

೨೬. ಅದೇ, ಪು.೩೦೧

೨೭. ಅದೇ.

೨೮. ವಾಸುದೇವನ್ ಸಿ.ಎಸ್, ೨೦೦೧; ಹಂಪಿ ಪರಿಸರದ ಕೆರೆಗಳು, ಪು.೮,

೨೯. ಚಂದ್ರಶೇಖರಯ್ಯ ಬಿ.ಎಂ. ೨೦೦೫; ಕರ್ನಾಟಕದ ಸಾಂಸ್ಕೃತಿಕ ಇತಿಹಾಸ ಪರಂಪರೆ, ಪು.೧೨೧.

೩೦. ದಿಕ್ಷೀತ್ ಜಿ.ಎಸ್. ಮತ್ತು ಇತರರು, ೨೦೦೦; ಕರ್ನಾಟಕದಲ್ಲಿ ಕೆರೆ ನೀರಾವರಿ, ಪು.೨೭

೩೧. ಗೋಪಾಲ್ ಆರ್., ೨೦೦೯; ಪೂರ್ವೋಕ್ತ, ಪು.೩೦

೩೨. EC. Vol XII, ನಂ.೧೪೦, ಕೆರೆಗೋಡಿ, ಪು.೭೦; ಯೋಗೀಶ್ವರಪ್ಪ ಡಿ.ಎನ್ (ಸಂ), ೨೦೦೨; ಕಲ್ಪಸಿರಿ, ಪು.೧೧೫

೩೩. ಯೋಗೀಶ್ವರಪ್ಪ ಡಿ.ಎನ್ (ಸಂ), ೨೦೦೨; ಪೂರ್ವೋಕ್ತ, ಪು.೭೦

೩೪. ನಾಗಭೂಷಣ, ೧೯೯೧; ಗುಬ್ಬಿ ಒಂದು ಸಾಂಸ್ಕೃತಿಕ ದರ್ಶನ, ಪು.೮

೩೫. S.I.I.XI (1), No. 7, P.4, ದಿಕ್ಷೀತ್ ಜಿ.ಎಸ್. ಮತ್ತು ಇತರರು, ಪೂರ್ವೋಕ್ತ, ಪು.೩೧

೩೬. S.I.I. Vol XI, ನಂ.೯, ಪು.೫

೩೭. ಗೋಪಾಲ್ ಆರ್. (ಸಂ), ೨೦೦೯; ಪೂರ್ವೋಕ್ತ, ಪು.೫೧.

೩೮. ಭೈರಪ್ಪ ಕೆ, ಪೂರ್ವೋಕ್ತ, ಪು.೩

೩೯. ಅದೇ.

೪೦. ಯೋಗೀಶ್ವರಪ್ಪ ಡಿ.ಎನ್ (ಸಂ), ೨೦೦೨; ಪೂರ್ವೋಕ್ತ, ಪು.೧೧೬.

೪೧. ಗೋಪಾಲ್ ಆರ್. (ಸಂ), ೨೦೦೯; ಪೂರ್ವೋಕ್ತ, ಪು.೯೪.

೪೨. ದಿಕ್ಷೀತ್ ಜಿ.ಎಸ್. ಮತ್ತು ಇತರರು, ಪೂರ್ವೋಕ್ತ, ಪು.೩೯

೪೩. EC. Vol XII, ನಂ.೮೦, ತಂಡಗ, ಪು.೩೩

೪೪. ಅದೇ.

೪೫. ಯೋಗೀಶ್ವರಪ್ಪ ಡಿ.ಎನ್ ೧೯೯೯; ಹಾಗಲವಾಡಿ ನಾಯಕರು, ಪು.೨೩

೪೬. EC. Vol XVI (Suplimentary), ನಂ.೧೬, ಕೊಂಡಜ್ಜಿ, ಪು.೪೧

೪೭. EC. Vol XII, ನಂ.೨, ತುರುವೇಕೆರೆ, ಪು.೧೧೮; ಅಭಿಶಂಕರ್, ೧೯೬೯; ತುಮಕೂರು ಜಿಲ್ಲಾ ಗ್ಯಾಸೆಟಿಯರ್, ಪು.೩೪.

೪೮. EC. Vol XII, ನಂ.೨, ತುರುವೇಕೆರೆ, ಪು.೧೧೯; ಕವಿತಾ ಕೃಷ್ಣ (ಸಂ), ಪೂರ್ವೋಕ್ತ, ಪು.೬೯

೪೯. ದಿಕ್ಷೀತ್ ಜಿ.ಎಸ್. ಮತ್ತು ಇತರರು, ಪೂರ್ವೋಕ್ತ, ಪು.೫೦.

೫೦. ಗೋಪಾಲ್ ಆರ್. (ಸಂ), ೨೦೦೯; ಪೂರ್ವೋಕ್ತ, ಪು.೩೩೬.

೫೧. ಅದೇ, ಪು.೧೨೧.

೫೨. ಯೋಗೀಶ್ವರಪ್ಪ ಡಿ.ಎನ್ (ಸಂ), ೨೦೦೨; ಪೂರ್ವೋಕ್ತ, ಪು.೧೯೭.

೫೩. ಯೋಗೀಶ್ವರಪ್ಪ ಡಿ.ಎನ್ (ಸಂ), ೧೯೯೯; ಪೂರ್ವೋಕ್ತ, ಪು.೪೦

೫೪. ಅದೇ.

೫೫. ಭಾಸ್ಕರಪ್ಪ ಸಿ.ಎನ್., ಪೂರ್ವೋಕ್ತ, ಪು.೧೯೩.

೫೬. ಯೋಗೀಶ್ವರಪ್ಪ ಡಿ.ಎನ್ (ಸಂ), ೧೯೯೯; ಪೂರ್ವೋಕ್ತ, ಪು.೪೦

## ಅಧ್ಯಾಯ ೩

# ತುರುವೇಕರೆ ಪರಿಸರದ ಕೆರೆಗಳು

ತುಮಕೂರು ಜಿಲ್ಲೆಯ ಪ್ರಮುಖ ತಾಲೂಕುಗಳಲ್ಲಿ ತುರುವೇಕೆರೆ ತಾಲೂಕು ಒಂದಾಗಿದೆ. ಈ ತಾಲೂಕಿನಲ್ಲಿ ಅನೇಕ ಕೆರೆ, ಕಟ್ಟೆ ಮತ್ತು ಕುಂಟೆಗಳು ಇವೆ. ಇವುಗಳಲ್ಲಿ ಬಹುಪಾಲು ಪ್ರಾಚೀನ ಕಾಲದಲ್ಲಿ ನಿರ್ಮಿಸಿದಂತಹುಗಳೇ ಆಗಿವೆ. ಇವುಗಳಲ್ಲಿನ ಅನೇಕ ಕೆರೆಗಳು ಇಂದಿಗೂ ಇಲ್ಲಿನ ಕೃಷಿ ವ್ಯವಸಾಯಗಳಿಗೆ ನೀರನ್ನು ಪೂರೈಸುತ್ತಿವೆ. ಸುಮಾರು ೧೧೯ಕ್ಕೂ ಮಿಗಿಲಾದ ಕೆರೆಗಳಿವೆ. ಹೆಚ್ಚಿನ ಕೆರೆಗಳು ಹೊಯ್ಸಳ ಕಾಲಕ್ಕೆ ಸಂಬಂಧಿಸಿದವುಗಳಾಗಿವೆ. ಈ ಕಾಲದ ಕೆರೆಗಳನ್ನು ಶಾಸನಾಧಾರ, ಮತ್ತು ಕಟ್ಟುವಾಡಗಳ ರಚನಾ ವಿಧಾನಗಳಿಂದ ಗುರುತಿಸಬಹುದು. ಇನ್ನುಳಿದ ಕೆಲವು ಕೆರೆಗಳು ವಿಜಯನಗರ ಮತ್ತು ಪಾಳೆಗಾರರ ಆಳ್ವಿಕೆಗೆ ಒಳಪಟ್ಟಿವೆ. ಈ ಪರಿಸರದ ಹೊಯ್ಸಳ ಕಾಲದ ಕೆರೆಗಳ ಏರಿಗಳು ಸಹ ಒಂದು ನಿರ್ದಿಷ್ಟವಾದ ದಿಕ್ಕಿಗೆ ಇರುವುದು ಗಮನಾರ್ಹ ಸಂಗತಿ. ಬಹುತೇಕ ಏರಿಗಳು ಕೆರೆಯಿಂದ ಪೂರ್ವ ದಿಕ್ಕಿನಲ್ಲಿ ಇವೆ. ತಾಲೂಕಿನ ಪಶ್ಚಿಮ ಭಾಗವು ಎತ್ತರವಾಗಿದ್ದು, ಈ ಪ್ರದೇಶದಲ್ಲಿ ಬೀಳುವ ಮಳೆಯು ಸಣ್ಣ ತೊರೆಗಳಾಗಿ ಪೂರ್ವ ಭಾಗಕ್ಕೆ ಹರಿಯುತ್ತವೆ. ಆದುದರಿಂದ ಕೆರೆ ಏರಿಗಳನ್ನು ಸಹ ಪೂರ್ವ ದಿಕ್ಕಿಗೆ ಕಟ್ಟಲಾಗಿದೆ. ಅಲ್ಲಿನ ಭೌಗೋಳಿಕ ಅಂಶಗಳನ್ನು ಗಮನಿಸಿಕೊಂಡು ಕೆರೆಗಳ ಅಧ್ಯಯನ ಮಾಡಲಾಗಿದೆ. ಪ್ರಸ್ತುತ ತುರುವೇಕೆರೆ ತಾಲೂಕಿನ ಕ್ಷೇತ್ರಕಾರ್ಯ ಕೈಗೊಂಡು ಅಲ್ಲಿ ಲಭ್ಯವಿರುವ ಮಾಹಿತಿ ಸಂಗ್ರಹಿಸಿ ಶಾಸನಾಧಾರಗಳಿಂದ ಚರ್ಚಿಸಲಾಗಿದೆ.

ಪ್ರಾಚೀನ ಕಾಲದಿಂದಲೂ ಇಲ್ಲಿನ ಕೆರೆಗಳಿಗೆ ವಿವಿಧ ಹೆಸರುಗಳಿವೆ. ಅವುಗಳೆಂದರೆ ಕೆರೆ, ಕಟ್ಟೆ, ತಟಾಕ, ಸಾಗರ, ಕೊಳ, ಕುಂಟೆ ಇವೇ ಮೊದಲಾದ ಪದಗಳು ಈ ಪ್ರದೇಶದಲ್ಲಿ ದೊರೆತ ಶಾಸನಗಳಿಂದ ತಿಳಿದುಬಂದಿದೆ.[೧] ಇವುಗಳೊಂದಿಗೆ ಕೆರೆಯ ವಿಸ್ತೀರ್ಣತೆಯನ್ನು ಸೂಚಿಸುವ ಕೆಲವೊಂದು ಪದಗಳು ಕೆರೆಯ ಹೆಸರಿನ ಜೊತೆಯಲ್ಲಿ ಬಳಕೆಯಲ್ಲಿವೆ.

ಉದಾ: ತುರುವೇಕೆರೆ ತಾಲೂಕಿನ ನಾಗಲಾಪುರದಲ್ಲಿ ಎರಡು ಕೆರೆಗಳಿವೆ. ಅವುಗಳನ್ನು 'ಚಿಕ್ಕಕೆರೆ' ಮತ್ತು 'ದೊಡ್ಡಕೆರೆ' ಎಂದು ಕರೆಯುತ್ತಾರೆ. ಈ ರೀತಿಯಲ್ಲಿ ಹೆಸರಿನಿಂದ ಕರೆಯುವ ಪದ್ಧತಿ ಅಲ್ಲಿಯ ಜನರಲ್ಲಿ ಇಂದಿಗೂ ಪ್ರಚಲಿತದಲ್ಲಿದೆ. 'ಪ್ರಾನ್ಸಿಸ್ ಬೂಕನ್' ಕೆರೆ ಮತ್ತು ಕಟ್ಟೆಗಳನ್ನು ಹೀಗೆ ಗುರುತಿಸಿದ್ದಾನೆ. ಜಾನುವಾರುಗಳಿಗೆ ಕುಡಿಯುವ ನೀರಿಗಾಗಿ ನಿರ್ಮಿಸಲ್ಪಟ್ಟ ಚಿಕ್ಕ ಸರೋವರವನ್ನೇ ಕಟ್ಟೆ ಎಂದು, ಕೃಷಿ ಭೂಮಿಗೆ ನೀರುಣಿಸುವ ದೊಡ್ಡ ಸರೋವರವನ್ನು ಕೆರೆ ಎಂದು ಕರೆದಿದ್ದಾನೆ.[೨]

ಪ್ರಸ್ತುತ ಕ್ಷೇತ್ರಕಾರ್ಯದಲ್ಲಿ ಕೆರೆ ಎಂದರೆ ದೊಡ್ಡದು. ಕಟ್ಟೆ ಎಂಬುದು ಕೆರೆಗಿಂತ ಚಿಕ್ಕದಾಗಿದ್ದು, ಕುಂಟೆಯ ಮೇಲೆ ಹೇಳಿದ ಎರಡಕ್ಕಿಂತ ಚಿಕ್ಕದು ಎಂಬುದಾಗಿ ಸ್ಥಳೀಯ ಗ್ರಾಮದ ಜನರಿಂದ ತಿಳಿದುಬಂದಿತು.

ಕೆರೆಗಳಿಗೆ ನೀರನ್ನು ಒದಗಿಸುವ ಮೂಲಗಳ ಆಧಾರಗಳ ಮೇಲೆ ಕೆರೆಗಳನ್ನು ಎರಡು ಪ್ರಕಾರಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ ಮೊದಲ ಪ್ರಕಾರದಂತೆ ನದಿ ಆಶ್ರಿತ ಕೆರೆಗಳು ಮತ್ತೊಂದು ಮಳೆ ಆಶ್ರಿತ ಕೆರೆಗಳು. ಕರ್ನಾಟಕದ ತುಮಕೂರು ಜಿಲ್ಲೆಯ ಬಹುತೇಕ ಕೆರೆಗಳು ಮಳೆಯನ್ನೇ ಆಶ್ರಯಿಸಿವೆ. ಕೆಲವೇ ಕೆರೆಗಳು ನದಿಯ ನೀರನ್ನು ಅವಲಂಬಿಸಿವೆ. ತುರುವೇಕೆರೆ ಪರಿಸರದ ಕೆರೆಗಳು ಮಳೆ ನೀರಿನಿಂದ ಕೂಡಿದ್ದು, ಇಂದು ಬಳಕೆಯಲ್ಲಿರುವ ಕೆಲವು ಪ್ರಾಚೀನ ಕೆರೆಗಳು ಇತ್ತೀಚಿಗೆ ಹೇಮಾವತಿ ನಾಲೆಯ ನೀರನ್ನು ಆಶ್ರಯಿಸಿವೆ. ಸರ್ಕಾರದ ನೀರಾವರಿ ಇಲಾಖೆಯವರು ಗೋರೂರು ಅಣೆಕಟ್ಟೆಯಿಂದ ಹೇಮಾವತಿ ಕಾಲುವೆಯ ಮುಖಾಂತರ ನೀರನ್ನು ಕೆರೆಗಳಿಗೆ ಸಾಗಿಸಿ ಪ್ರಾಚೀನ ಕೆರೆಗಳನ್ನು ಜೀವಂತವಾಗಿಸಿದ್ದಾರೆ.

ಉದಾ: ಮಲ್ಲಾಘಟ್ಟಕೆರೆ, ತುರುವೇಕೆರೆ, ಸಂಪಿಗೆ ಕೆರೆ, ಸಾರಿಗೆಹಳ್ಳಿಕೆರೆ, ಇನ್ನೂ ಮುಂತಾದ ಕೆಲವು ಕೆರೆಗಳಲ್ಲಿ ಎಲ್ಲಾ ಕಾಲದಲ್ಲಿಯೂ ನೀರು ಇರುತ್ತಿತ್ತು.

ಮಳೆ ನೀರನ್ನು ಆಶ್ರಯಿಸಿರುವ ಕೆರೆಗಳನ್ನು ನಿರ್ಮಿಸುವಾಗ ಪರಿಸರಕ್ಕೆ ಅನುಗುಣವಾಗಿ ಮೂರು ಅಥವಾ ನಾಲ್ಕು ಕೆರೆಗಳನ್ನು ಒಂದಕ್ಕೊಂದು ಹೊಂದಿಕೊಂಡಿರುವಂತೆ ಸಮೀಪದಲ್ಲಿಯೇ ಕಟ್ಟಿರುವುದನ್ನು ಗಮನಿಸಬಹುದು. ಉದಾ: ತುರುವೇಕೆರೆ ತಾಲೂಕಿನ ಕೆರೆಗಳು ಸರಣಿ ರೂಪದಲ್ಲಿ ನಿರ್ಮಾಣಗೊಂಡಿವೆ.

ಈ ಪರಿಸರದ ಕೆರೆಗಳ ಬಗ್ಗೆ ಇಲ್ಲಿನ ಒಂದು ಶಾಸನದಲ್ಲಿ ಕೆರೆಯ ನಿರ್ಮಾಣಕ್ಕೆ ಬೇಕಾದ ವಸ್ತುಗಳನ್ನು ಎಲ್ಲೆಡೆಯಿಂದಲೂ ಸಂಗ್ರಹಿಸಬಹುದು. ಏಕೆಂದರೆ ಇದೊಂದು ಸಾರ್ವಜನಿಕ ಕಾರ್ಯ ಈ ಗ್ರಾಮದ ಬ್ರಾಹ್ಮಣರು, ಮನೆ, ಬಾವಿ, ಕೆರೆಗಳ ನಿರ್ಮಾಣ ಕಾರ್ಯಕ್ಕೆ ಕಲ್ಲು ಬಂಡೆಗಳನ್ನು ಯಾವ ಗುಡ್ಡ ಗಣಿಗಳಿಂದಲೂ ಪಡೆಯಬಹುದು. ಇದಕ್ಕೆ ಯಾರು ಅಡ್ಡಿ ಉಂಟು ಮಾಡಬಾರೆಂದು ತಿಳಿಸಿದೆ.[೩]

ತುರುವೇಕೆರೆ ತಾಲೂಕಿನಲ್ಲಿ ಅಲ್ಲಿನ ಭೌಗೋಳಿಕತೆಗೆ ಅನುಗುಣವಾಗಿ ಹಲವಾರು ಪ್ರಾಚೀನ ಕೆರೆಗಳು ಇದ್ದು, ಅವುಗಳ ವಿವಿಧ ಭಾಗಗಳು ಈ ಕೆಳನಂತಿವೆ.

**ಏರಿ ನಿರ್ಮಾಣ:**

ಕೆರೆಯ ಒಂದು ಮುಖ್ಯ ಭಾಗ ಏರಿ ಅಥವಾ ಕಟ್ಟೆ ಸಾಮಾನ್ಯವಾಗಿ ತುರುವೇಕೆರೆ ಪರಿಸರದ ಎಲ್ಲಾ ಕೆರೆಗಳ ಏರಿಗಳು ಮಣ್ಣಿನಿಂದ ನಿರ್ಮಿಸಿದಂತಿವೆ. ಇವು ಕೆರೆಗಳಿಗೆ ಆಧಾರ ಸ್ತಂಭಗಳಾಗಿ ನೀರನ್ನು ಸಂಗ್ರಹಿಸುತ್ತವೆ. ಆದುದರಿಂದ ಈ ಭಾಗವನ್ನು ಅತ್ಯಂತ ಗಟ್ಟಿಯಾಗಿ ಕಟ್ಟಬೇಕಾಗುತ್ತದೆ. ಹೀಗೆ ಏರಿಯನ್ನು ನಿರ್ಮಿಸಲು ಮಣ್ಣನ್ನು ಹಾಕಿ ನೀರಿನಿಂದ ನೆನಸಿ ಗಟ್ಟಿ ಮಾಡಿ ಅದರ ಮೇಲೆ ಮತ್ತಷ್ಟು ಮಣ್ಣನ್ನು ಹಾಕುತ್ತಾ ಹೋಗುತ್ತಾರೆ. ಈ ರೀತಿ ಪದೇ ಪದೇ ಮಾಡುವುದರಿಂದ ಮಣ್ಣು ಚೆನ್ನಾಗಿ ಕೂಡಿಕೊಂಡು ಗಟ್ಟಿಯಾಗುತ್ತದೆ. ಏರಿಯನ್ನು ಕಟ್ಟಲು ಕೆರೆಯ ತಳಭಾಗದ ಮಣ್ಣನ್ನು ಬಳಸಿಕೊಂಡು ಕೆರೆಯ ಆಳ ಮತ್ತು ಅಗಲವನ್ನು ವಿಸ್ತರಿಸಲಾಗಿದೆ. ಇದರಿಂದ ಕೆರೆಯಲ್ಲಿ ಹೆಚ್ಚಿನ ನೀರು ಸಂಗ್ರಹವಾಗುತ್ತದೆ. ಕೆರೆಯ ಏರಿಯ ಎರಡು ಬದಿಗಳು ಇಳಿಜಾರಾಗಿದ್ದು, ಅದರ ಮೇಲೆ ನೀರು ನಿಲ್ಲದಂತೆ, ಕಟ್ಟಲಾಗಿದೆ. ಏರಿಯ ತಳಭಾಗದ ಅಗಲ ದೊಡ್ಡದಾಗಿದ್ದು, ಪಾರ್ಶ್ವದ ಇಳಿಜಾರುಗಳಿಗೆ ಅನುಗುಣವಾಗಿ ನಿರ್ಮಿಸಲಾಗಿದೆ. ಮತ್ತು ಏರಿಯ ತಲೆಭಾಗದ (ಮೇಲ್ಭಾಗದ) ಅಗಲ ಕಿರಿದಾಗಿದ್ದು, ಜನ ದನ ಓಡಾಡುವಷ್ಟು ಜಾಗ ಇರುತ್ತಿತ್ತು. ಕೆಲವು ಕೆರೆಗಳಲ್ಲಿ ವಾಹನಗಳು ಚಲಿಸುವಷ್ಟು ಅಗಲ ಇದೆ. ಉದಾ: ಮಲ್ಲಾಘಟ್ಟ ಕೆರೆ, ಸಂಪಿಗೆ ಕೆರೆ.

ಈ ರೀತಿಯಾಗಿ ನಿರ್ಮಿಸುವುದು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸಂಪರ್ಕ ಕಲ್ಪಿಸುವ ಉದ್ದೇಶದಿಂದ ನಿರ್ಮಾಣವಾಗಿವೆ. ನೀರಿನ ಬದಿಯ ಏರಿ ಹೆಚ್ಚು ಲಂಬಾಕೃತಿಯನ್ನು ಹೊಂದಿರುತ್ತದೆ. ಈ ಬದಿಯನ್ನು ದೊಡ್ಡ ದೊಡ್ಡ ಬಂಡೆಗಳಿಂದ ಕಟ್ಟಲಾಗಿದೆ. ಆ ಕಲ್ಲು ಕಟ್ಟಡದ ಕಟ್ಟುವಾಡವು ನೀರಿನ ಅಲೆಗಳ ಹೊಡೆತದಿಂದ ಏರಿಗೆ ಅಪಾಯ ಉಂಟಾಗದಂತೆ ರಕ್ಷಣೆ ಒದಗಿಸಿದೆ. ಬಾಂಡು ಕಲ್ಲುಗಳನ್ನು ಆಯಕಟ್ಟಿನಲ್ಲಿ ಅಧಿಕವಾಗಿ ಉಪಯೋಗಿಸಿದ್ದಾರೆ. ಈ ಭಾಗವು ಇಳಿಜಾರವಾಗಿದ್ದು, ಇದನ್ನು ಕಟ್ಟುವಾಡ ಎನ್ನುವರು. ನೀರಿನ ಒತ್ತಡವನ್ನು ವಿರುದ್ಧ ದಿಕ್ಕಿನಿಂದ ತಡೆದು ಏರಿಗೆ ಸಾಕಷ್ಟು ಬಲವನ್ನು ಕೊಡುವಲ್ಲಿ ಸಹಾಯಕವಾಗಿರುತ್ತದೆ. ಏರಿಯ ಹಿಂಬದಿಯ ಇಳಿಜಾರಿಗೆ, ಭಾರಿ ಮಳೆ ಬಿದ್ದು, ಮಣ್ಣು ಕೊಚ್ಚಿ ಹೋಗದೆ ಇರುವಂತೆ, ಹುಲ್ಲು ಬೆಳಸಿ ರಕ್ಷಣೆ ನೀಡಿರುವುದು ಕಂಡುಬಂದಿದೆ. ಮಾಯಸಂದ್ರ ಮತ್ತು ಮಾವಿನ ಕೆರೆಯ ಏರಿಯ ಒಳಪಾರ್ಶ್ವವು ಕಲ್ಲು ಕಟ್ಟಡದ ಗೋಡೆಯಂತೆ ನಿರ್ಮಾಣವಾಗಿದೆ. ಇಂತಹ ರಚನೆಯೂ ಕೆಲವು ಕೆರೆಗಳ ಏರಿಯ ಎರಡು ಪಾರ್ಶ್ವಗಳಲ್ಲಿ ಕಂಡುಬರುತ್ತದೆ. ಪ್ರಸ್ತುತ ಕ್ಷೇತ್ರಕಾರ್ಯ

ಕೈಗೊಂಡ ಸಂದರ್ಭದಲ್ಲಿ ತುರುವೇಕೆರೆ ಪರಿಸರದ ಕೆರೆಗಳಲ್ಲಿ ಏರಿಯ ಪಾರ್ಶ್ವದ ಒಂದು ಭಾಗದಲ್ಲಿ ಕಟ್ಟುವಾಡ ಇರುವುದನ್ನು ಬಿಟ್ಟರೆ ಹೊರ ಪಾರ್ಶ್ವದಲ್ಲಿ ಕಂಡುಬಂದಿಲ್ಲ. ಈ ರೀತಿಯ ರಚನೆಯು ವಿಜಯನಗರ ಕಾಲದ ಕೆಲವು ಕೆರೆಗಳಲ್ಲಿ ಕಂಡುಬಂದಿದೆ.

ತುರುವೇಕೆರೆ ತಾಲೂಕಿನ ಯಾವುದೇ ಕೆರೆಗಳ ಏರಿಗಳನ್ನು ಲಂಬವಾಗಿ ಕಟ್ಟದೆ, ಅಂಕು ಡೊಂಕಾಗಿಯೇ ಕಟ್ಟಿದ್ದಾರೆ. ಇದರಿಂದಾಗಿ ನೀರಿನಿಂದ ಏರಿಗೆ ಬೀಳುವ ಒತ್ತಡವು ಸಮನಾಗಿ ಹಂಚಿಕೆಯಾಗುತ್ತದೆ. ಮತ್ತು ಏರಿ ಒಡೆದಲ್ಲಿ ಅದನ್ನು ಸುಲಭವಾಗಿ ಸರಿಪಡಿಸಲು ಸಹಾಯಕವಾಗಿದೆ. ಈ ರೀತಿಯ ವ್ಯವಸ್ಥೆಯು ವೈಜ್ಞಾನಿಕವಾಗಿ ಮಹತ್ವವನ್ನು ಪಡೆದಿದೆ.

ಉದಾಹರಣೆಗೆ ಜಡೆಯ ಕೆರೆಯ ಏರಿಯು ಸುಮಾರು ೧.೫ ಕಿ.ಮೀ. ಉದ್ದವಾಗಿದೆ. ಮತ್ತು ತಂಡಗ ಕೆರೆಯ ಏರಿಯು ಸುಮಾರು ೧ ಕಿ.ಮೀ. ಉದ್ದವಾಗಿದೆ.

**ತೂಬುಗಳ ರಚನೆ:**

ತೂಬುಗಳು ಕೆರೆಯ ಒಂದು ಮುಖ್ಯ ಅವಿಭಾಜ್ಯ ಅಂಗ. ತೂಬುಗಳೇ ಕೆರೆಯ ನೀರನ್ನು ಹೊರಗೆ ಹೋಗದಂತೆ ತಡೆ ಹಿಡಿದಿರುವ ಸಾಧನಗಳಾಗಿವೆ. ಒಂದೊಂದು ಕೆರೆಗೂ ಒಂದು ಅಥವಾ ಎರಡು ತೂಬು ಇರುತ್ತಿದ್ದವು. ಕೆಲವೊಮ್ಮೆ ಮೂರು ಅಥವಾ ನಾಲ್ಕು ಇದ್ದುದು ಉಂಟು. ಕೆರೆಯ ಗಾತ್ರ ಸಾಮರ್ಥ್ಯದ ಆಧಾರದ ಮೇಲೆ ತೂಬುಗಳನ್ನು ಅಳವಡಿಸಿಕೊಳ್ಳಲಾಗುವುದು. ತುರುವೇಕೆರೆ ಕೆರೆಯಲ್ಲಿ ಎರಡು ತೂಬುಗಳು ಇದ್ದರೆ, ಮಾಯಸಂದ್ರ ಕೆರೆಯಲ್ಲಿ ನಾಲ್ಕು ತೂಬುಗಳಿವೆ. ತೂಬುಗಳನ್ನು ಸಾಮಾನ್ಯವಾಗಿ ಕಲ್ಲಿನಿಂದ ರಚಿಸಿದ್ದು, ಎರಡು ಕಂಬಗಳಿಂದ ಕೂಡಿರುತ್ತವೆ. ಆ ಕಂಬಗಳಿಗೆ ತಲೆಯಲ್ಲಿ ಒಂದು, ನಡುವಿನಲ್ಲಿ ಒಂದು ಅಡ್ಡಕಲ್ಲನ್ನು ಇರಿಸಲಾಗುತ್ತದೆ. ಈ ಎರಡು ಅಡ್ಡಕಲ್ಲುಗಳ ನಡುವೆ ಸುಮಾರು ೨೫ ಸೆ.ಮೀ. ವ್ಯಾಸದ ರಂಧ್ರವಿರುತ್ತದೆ. ಇದರ ಮೂಲಕವಾಗಿ ರಂಧ್ರದ ಅಳತೆಗೆ ತಕ್ಕ ವ್ಯಾಸವುಳ್ಳ ಮರದ ತುಂಡನ್ನು ಇಟ್ಟು ರಂಧ್ರವನ್ನು ಮುಚ್ಚಲಾಗುತ್ತದೆ. ಈ ಮರದ ದಿಮ್ಮಿಯನ್ನು ಮೇಲೆಕ್ಕೆತ್ತಿದಾಗ ನೀರು ಕಾಲುವೆಯ ಮುಖಾಂತರ ಹರಿದು ಆಯಕಟ್ಟು ಪ್ರದೇಶಕ್ಕೆ ಹರಿದು ಹೋಗುತ್ತದೆ. ಮರದ ಒಂದು ವಿಶೇಷತೆಯೇನೆಂದರೆ, ಅದು ನೀರಿನಲ್ಲಿ ನೆನೆದಾಗ ನೀರು ಕುಡಿದು ಹಿಗ್ಗುತ್ತದೆ. ಈ ರೀತಿಯಾಗಿ ಹಿಗ್ಗಿದ ಮರದ ತುಂಡು ರಂಧ್ರದಲ್ಲಿ ಬಿಗಿಯಾಗಿ ಕುಳಿತು ಹೊರ ಕಾಲುವೆಯ ಮುಖಾಂತರ ನೀರು ಹರಿಯುವುದನ್ನು ಆದಷ್ಟು ಮಟ್ಟಿಗೆ ತಡೆಯುತ್ತದೆ. ತೂಬಿನ ಅಂತರ್ಮಾರ್ಗದ ಇನ್ನೊಂದು ತುದಿಗೆ ತೊಟ್ಟಿಯ ನಿರ್ಮಾಣವಿದ್ದು ೧ ಅಥವಾ ೩ ಕಾಲುವೆಗಳನ್ನು ಸಂಪರ್ಕಿಸಿರುತ್ತದೆ. ಈ ರೀತಿಯ ತೊಟ್ಟಿಯ ರಚನೆ ಮಾವಿನ ಕೆರೆ ಕೆರೆಯಲ್ಲಿ ಕಂಡುಬಂದಿದೆ.

ತೂಬುಗಳನ್ನು ಸಾಮಾನ್ಯವಾಗಿ ಕೆರೆ ಏರಿಯಿಂದ ಸುಮಾರು ಹತ್ತರಿಂದ ಹದಿನೈದು ಅಡಿ ದೂರದಲ್ಲಿ ಇರಿಸಲಾಗಿದೆ. ಕೆಲವು ತೂಬುಗಳನ್ನು ಕೋಡಿ ಮತ್ತು ಏರಿಗಳಲ್ಲಿ ಅಳವಡಿಸಲಾಗಿದೆ.

ತುರುವೇಕೆರೆ ಮತ್ತು ಸಂಪಿಗೆ ಕೆರೆಯಲ್ಲಿ ಒಂದು ತೂಬನ್ನು ಕೋಡಿಗೆ ಮತ್ತೊಂದು ತೂಬನ್ನು ಏರಿಯಿಂದ ಸುಮಾರು ೧೦ ಅಡಿ ದೂರದಲ್ಲಿ ನಿರ್ಮಿಸಲಾಗಿದೆ. ಅದೇ ರೀತಿ ಸಾರಿಗೆಹಳ್ಳಿ ಮತ್ತು ಕೊಂಡಜ್ಜಿ ಕೆರೆಯ ತೂಬುಗಳು ಏರಿಯಿಂದ ೮ ಅಡಿ ದೂರದಲ್ಲಿವೆ. ಈ ಪರಿಸರದ ಹೆಚ್ಚಿನ ಕೆರೆಗಳ ತೂಬುಗಳು ಏರಿಯಲ್ಲಿ ಕಂಡುಬಂದಿವೆ. ಅವುಗಳಲ್ಲಿ ಮುಖ್ಯವಾಗಿ ಮಾಯಸಂದ್ರ ಕೆರೆಯ ಒಂದು ತೂಬು, ಜಡೆಯ, ನಾಗಲಾಪುರ ತಂಡಗ, ರಾಮಸಾಗರ, ತುಯಲಹಳ್ಳಿ, ದುಮ್ಮೇನಹಳ್ಳಿ, ಮಾವಿನಕೆರೆ ಮತ್ತು ನೀರುಗುಂದ ಕೆರೆಯ ತೂಬುಗಳನ್ನು ಏರಿಗೆ ಅಳವಡಿಸಲಾಗಿದೆ. ವಿಜಯನಗರ ಕಾಲದ ಕೆರೆಗಳ ತೂಬುಗಳನ್ನು ಏರಿಯಿಂದ ಸುಮಾರು ೧೦ ರಿಂದ ೧೫ ಅಡಿ ದೂರದಲ್ಲಿ ಇರಿಸಿದ್ದಾರೆ. ಇದರಿಂದ ಏರಿ, ತೂಬು ಮತ್ತು ಕಾಲುವೆಗಳಿಗೆ ಯಾವುದೇ ವಿಧವಾದ ಅಪಾಯ ಉಂಟಾಗುತ್ತಿರಲಿಲ್ಲ.

ತೂಬುಗಳಿಂದ ನೀರು ಹಾಯಿಸುವ ಕಾರ್ಯವನ್ನು ನೀರ್ಗಂಟೆಗಳು ಮಾಡುತ್ತಿದ್ದರು. ನೀರು ಹಾಯಿಸಬೇಕೆಂದಾಗ ಅವರು ಕೆರೆಯ ನೀರಿನಲ್ಲಿ ಈಜಿಕೊಂಡು ಹೋಗಿ ತೂಬಿನ ಮರವನ್ನು ತೆಗೆದು ನೀರನ್ನು ಹಾಯಿಸುತ್ತಿದ್ದರು. ಆಯಕಟ್ಟಿನ ಪ್ರದೇಶಕ್ಕೆ ಬೇಕಾಗುವಷ್ಟು ನೀರು ಹಾಯಿಸಿ ನಂತರ ಮರವನ್ನು ತೂಬಿನ ರಂಧ್ರಕ್ಕೆ ಅಳವಡಿಸಿ ಕಾಲುವೆಯ ಬಾಯಿಯನ್ನು ಮುಚ್ಚುವುದರ ಮೂಲಕ ಕೆರೆ ನೀರನ್ನು ನಿಯಂತ್ರಿಸುತ್ತಿದ್ದರು. ಇತ್ತೀಚೆಗೆ ಕೆಲವು ಕೆರೆಗಳ ನಿರ್ವಹಣೆಯನ್ನು ಇಲಾಖೆ ನಿರ್ವಹಿಸುತ್ತಿದೆ. ಉದಾ: ತುರುವೇಕೆರೆ, ಮಲ್ಲಾಘಟ್ಟ ಮತ್ತು ಸಾರಿಗೆಹಳ್ಳಿ ಕೆರೆಗಳು ಅಮಾನಿಕ ಕೆರೆಗಳಾಗಿವೆ.

ತುರುವೇಕೆರೆ ತಾಲೂಕಿನ ಕೆರೆಗಳಲ್ಲಿ ಮೇಲೆ ವಿವರಿಸಿದ ಮರದ ದಿಮ್ಮಿಗಳ (ಬಿರಡೆ) ತೂಬುಗಳು ಬಳಕೆಯಲ್ಲಿದ್ದವು. ಈ ರೀತಿಯ ಕೆಲವು ತೂಬುಗಳ ಹಿಂಭಾಗದಲ್ಲಿ ಕಾಂಕ್ರಿಟ್ ಇಲ್ಲವೆ ಸೈಜುಗಲ್ಲುಗಳ ಗೋಡೆಗಳು ಕಟ್ಟಲ್ಪಟ್ಟಿವೆ. ಈ ರೀತಿಯಾದ ಎರಡು ತೂಬುಗಳು ಮಲ್ಲಾಘಟ್ಟ ಕೆರೆಯಲ್ಲಿ ಮತ್ತು ವೀರಸಾಗರ ಕೆರೆಯ ದಕ್ಷಿಣ ದಿಕ್ಕಿನ ಏರಿಯಿಂದ ಎರಡು ಅಡಿ ದೂರದಲ್ಲಿ ಒಂದು ತೂಬು ಇದೆ. ಪ್ರಾಚೀನ ಕಾಲದ ಕೆರೆಗಳನ್ನು ಪುನರುಜ್ಜೀವನಗೊಳಿಸುವ ಸಂದರ್ಭದಲ್ಲಿ ಸರ್ಕಾರದ ನೀರಾವರಿ ಇಲಾಖೆಯವರು ಮೂಲ ತೂಬಿಗೆ ಯಾವುದೇ ವಿಧದ ಧಕ್ಕೆ ಉಂಟಾಗದಂತೆ ಮರದ ತುಂಡನ್ನೇ ಬಳಸಿರುತ್ತಾರೆ. ಇಲಾಖೆಯವರು ತೂಬಿನ ರಂಧ್ರಕ್ಕೆ ಮರದ ತುಂಡು ಇಟ್ಟು ಅದರ ಮೇಲ್ಭಾಗಕ್ಕೆ ಕಬ್ಬಿಣದ ಸಲಾಕೆಯನ್ನು ಅಳವಡಿಸಿ ತಿರುಚುವ ಮೂಲಕ ಯಾಂತ್ರೀಕರಿಸಿದ್ದಾರೆ. ಕೆರೆ ಏರಿಯಿಂದ ತೂಬಿರುವ ಜಾಗವನ್ನು ತಲುಪಲು ಸಿಮೆಂಟಿನ ಚಿಕ್ಕ ಸೇತುವೆಯನ್ನು ಸಹ ಅಳವಡಿಸಿರುತ್ತಾರೆ. ಮಾಯಸಂದ್ರ ಕೆರೆಯ ಒಂದು ತೂಬನ್ನು ತಲುಪಲು ಈ ರೀತಿಯ ಸೇತುವೆಯನ್ನು ನಿರ್ಮಾಣ ಮಾಡಿದ್ದಾರೆ. ಇದೆ ಕೆರೆಯ ಉತ್ತರ ದಿಕ್ಕಿನ ಕೋಡಿ ಹತ್ತಿರದ ತೂಬಿಗೆ ಕಬ್ಬಿಣದ ಸಲಾಕಿಗೆ ಬದಲು, ಕಬ್ಬಿಣದ ಸರಪಣಿ

(ಚೈನ್)ಯನ್ನು ಬಳಸಿರುವುದು ಕಂಡುಬಂದಿದೆ. ಈ ತೂಬಿನ ನಿರ್ವಹಣೆಗೆ ಅನುಕೂಲವಾಗುವಂತೆ ತೂಬಿನಿಂದ ೮ ಅಡಿ ದೂರದಲ್ಲಿ ಸುಮಾರು ೫ ಮೀ. ಎತ್ತರದ ಚಚೌಕಕಾರದ ಸಿಮೆಂಟ್ ಕಟ್ಟಡವನ್ನು ನಿರ್ಮಿಸಲಾಗಿದೆ. ಕೆಲವೊಂದು ಸಂದರ್ಭದಲ್ಲಿ ಮರದ ಬಾಗಿಲಿಗೆ ಬದಲಾಗಿ ಕಬ್ಬಿಣದ ಬಾಗಿಲನ್ನು ಬಳಸಿದ್ದಾರೆ. ಹೆಚ್ಚಾಗಿ ಈ ತಾಲೂಕಿನ ಕೆರೆಗಳಲ್ಲಿ ಮರದ ತುಂಡಿನ ಬಾಗಿಲುಗಳಿವೆ.

### ಕಾಲುವೆಗಳ ವ್ಯವಸ್ಥೆ

ಕೆರೆಯಲ್ಲಿ ಸಂಗ್ರಹವಾದ ನೀರನ್ನು ನಿಯಂತ್ರಿಸಿ ಆಯಕಟ್ಟು ಪ್ರದೇಶಕ್ಕೆ ನೀರನ್ನು ಹಾಯಿಸುವ ಮಾರ್ಗಕ್ಕೆ "ಕಾಲುವೆ" ಎಂದು ಹೆಸರು. ಕಾಲುವೆಯು ಕೆರೆಯ ಅವಿಭಾಜ್ಯ ಅಂಗಗಳಲ್ಲಿ ಒಂದು. ಕೆರೆಯ ನೀರನ್ನು ಕೆಲವೊಮ್ಮೆ ಕಾಲುವೆಗಳ ಮೂಲಕ ಏರಿಯ ಕೆಳಭಾಗದಿಂದ ವ್ಯವಸಾಯ ಭೂಮಿಗೆ ಹಾಯಿಸುತ್ತಿದ್ದರು. ಕಾಲುವೆಗಳಿಗೆ ತೂಬುಗಳನ್ನು ಇರಿಸಿ ಕೆರೆಯ ನೀರನ್ನು ಸಮರ್ಪಕವಾಗಿ ನಿಯಂತ್ರಿಸುತ್ತಿದ್ದರು. ಕೆರೆಗೆ ನೀರು ಬರಲು ಕಾಲುವೆಗಳನ್ನು ಏರಿಯ ಕೆಳಭಾಗದಲ್ಲಿ ನಿರ್ಮಿಸಲಾಗುತ್ತಿತ್ತು. ಇವುಗಳನ್ನು ಕಲ್ಲುಗಳಿಂದ ಕಟ್ಟಲಾಗಿರುತ್ತದೆ. ಕೆಲವೊಮ್ಮೆ ಮರವನ್ನು ಬಳಸುತ್ತಿದ್ದರೆಂದು ತುಮಕೂರು ಜಿಲ್ಲೆಯ ರಾಮಚಂದ್ರ ಹಳ್ಳಿಯ ಶಾಸನವು ತಿಳಿಸುತ್ತದೆ. ಒಂದು ಕೆರೆಗೆ ಒಂದು, ಎರಡು, ಮೂರು ಅಥವಾ ನಾಲ್ಕು ಕಾಲುವೆಗಳು ಸಹ ಇರುತ್ತಿದ್ದವು. ಕೆರೆಯಲ್ಲಿ ಮೇಲ್ಮಟ್ಟದ ಕಾಲುವೆ ಮತ್ತು ಕೆಳಮಟ್ಟದ ಕಾಲುವೆಗಳು ಇದ್ದವು. ಕೆರೆಯು ತುಂಬಿದಾಗ ಮೇಲ್ಮಟ್ಟದಲ್ಲಿದ್ದ ಕಾಲುವೆಯಿಂದ ನೀರನ್ನು ಹಾಯಿಸಲಾಗುತ್ತಿತ್ತು. ನೀರು ಕೆಳಮಟ್ಟ ಬಂದಾಗ ಕೆಳಮಟ್ಟದ ಕಾಲುವೆಯಿಂದ ನೀರನ್ನು ಹಾಯಿಸುತ್ತಿದ್ದರು. ಈ ರೀತಿಯಾ ವ್ಯವಸ್ಥೆಯೂ ಇಂದಿಗೂ ಪ್ರಚಲಿತದಲ್ಲಿವೆ. ನೀರಾವರಿ ಕಾರ್ಯಗಳಿಗೆಂದೇ ನಿರ್ಮಿಸಲಾದ ಕೆರೆ ಹಾಗೂ ಇತರ ಮೂಲಗಳಿಂದ ನೀರನ್ನು ಹರಿಸುವ ಕಾಲುವೆಗಳನ್ನು ರಕ್ಷಿಸುವುದು ಪ್ರಮುಖ ಕಾರ್ಯ. ಏಕೆಂದರೆ ಈ ಕಾಲುವೆಗಳು ಇಲ್ಲದೇ ಹೋದಲ್ಲಿ ನೀರಾವರಿ ವ್ಯವಸ್ಥೆ ಇಲ್ಲದಂತಾಗುತ್ತದೆ. ನೀರನ್ನು ಸಂಗ್ರಹಿಸುವ ಮತ್ತು ಅದರ ಸದುಪಯೋಗಕ್ಕೆ ಕಾಲುವೆಗಳ ನಿರ್ಮಾಣ ಕಾರ್ಯಗಳನ್ನು ಕುರಿತು ಹಲವು ಶಾಸನಗಳಲ್ಲಿ ಉಲ್ಲೇಖವಾಗಿದೆ.

ಉದಾ:- ಕ್ರಿ.ಶ. ೧೫೬೭ರ ಅನಂತಪುರ ಜಿಲ್ಲೆಯ ಚಿನಕಟಲದ ಒಂದು ಶಾಸನವು[೯]. ನೀರಾವರಿ ಕಾಲುವೆಯು ಮುಚ್ಚಿ ಹೋಗಿದ್ದು, ಅದನ್ನು ಪುನಃ ಅಗೆಸಲಾದ ಸಂಗತಿಯನ್ನು ತಿಳಿಸುತ್ತದೆ.

ತುರುವೇಕೆರೆ ಪರಿಸರದಲ್ಲಿ ಎರಡು ರೀತಿಯಾದ ಕಾಲುವೆಗಳು ಕಂಡುಬಂದಿವೆ. ಒಂದು ಅಂತರ್ ಕಾಲುವೆ. ಈ ಕಾಲುವೆಗಳ ಮೂಲಕ ಕೆರೆಗೆ ನೀರನ್ನು ಸಂಗ್ರಹಿಸಲಾಗುತ್ತದೆ.

ಮತ್ತೊಂದು ಹೊರ ಕಾಲುವೆ ಈ ರೀತಿಯಾದ ಕಾಲುವೆಗಳನ್ನು ಕೆರೆಗಳ ತೂಬಿಗೆ ಅನುಸಾರವಾಗಿ ನಿರ್ಮಿಸಲಾಗಿದೆ. ಇವುಗಳ ಮೂಲಕ ಆಯಕಟ್ಟು ಪ್ರದೇಶಕ್ಕೆ ನೀರನ್ನು ಹರಿಸಲಾಗುತ್ತದೆ. ಕೆಲವು ಕೆರೆಗಳ ಕೋಡಿಗಳಲ್ಲಿ ತೂಬುಗಳಿದ್ದರೆ, ತೂಬಿಗೆ ಹೊಂದಿಕೊಂಡಂತೆ ಕಾಲುವೆಗಳು ಕೋಡಿಯಿಂದ ಹೊಸ ಬಂದಿರುತ್ತವೆ. ಇಂತಹ ಕಾಲುವೆಗಳ ರಚನೆ ತುರುವೇಕೆರೆಯ ದಕ್ಷಿಣ ದಿಕ್ಕಿನ ಕೋಡಿ ಹತ್ತಿರ ಇದೆ. ಮಾಯಸಂದ್ರ ಕೆರೆಯಲ್ಲಿ ಮೂರು ಕಾಲುವೆಗಳು ಏರಿಯಿಂದ ಹೊರಬಂದಿವೆ. ಹಾಗೆಯೇ ಮಲ್ಲಾಘಟ್ಟ ಕೆರಯಲ್ಲಿ ಎರಡು ಹೊರ ಕಾಲುವೆಗಳಿವೆ. ಅದರಲ್ಲಿ ಉತ್ತರ ದಿಕ್ಕಿನ ಕಾಲುವೆಗೆ ಹೊಂದಿಕೊಂಡಂತೆ ಅನೇಕ ಸಣ್ಣಪುಟ್ಟ ಕಾಲುವೆಗಳನ್ನು ಜೋಡಿಸಿ ಅಚ್ಚುಕಟ್ಟು ಪ್ರದೇಶಕ್ಕೆ ನೀರನ್ನು ಹಾಯಿಸಲಾಗುತ್ತದೆ. ಇಂತಹ ಕಾಲುವೆ ವ್ಯವಸ್ಥೆಗಳು ಈ ಪರಿಸರದ ಸಂಪಿಗೆ, ಜಡೆಯ, ನಾಗಲಾಪುರ, ತಂಡಗ, ಕೊಂಡಜ್ಜಿ ಮತ್ತು ಸಾರಿಗೆಹಳ್ಳಿ ಮುಂತಾದ ಕೆರೆಗಳಲ್ಲಿ ಕಂಡುಬಂದಿವೆ.

**ಕೋಡಿಗಳು**

ಕೆರೆಯ ವಿವಿಧ ಭಾಗಗಳಲ್ಲಿ ಕೋಡಿಯೂ ಒಂದು. ಪ್ರತಿಯೊಂದು ಕೆರೆಯಲ್ಲಿಯೂ ತೂಬಿನ ಜೊತೆಗೆ ಕಲ್ಲು ಕಟ್ಟಡದ ಕೋಡಿಯೂ ಇರುತ್ತಿತ್ತು. ಕೆರೆಯ ಗಾತ್ರವನ್ನು ಆಧರಿಸಿ ಕೆಲವು ಕೆರೆಗಳಲ್ಲಿ ಒಂದು ಕೋಡಿ ಇದ್ದರೆ, ಮತ್ತೊಂದು ಕೆರೆಯಲ್ಲಿ ಎರಡು ಕೋಡಿಗಳು ಕಂಡು ಬರುತ್ತವೆ. ಇವುಗಳ ಮೂಲಕ ಕೆರೆಯಲ್ಲಿನ ಹೆಚ್ಚುವರಿ ನೀರು ಕೆಳಗಣ ಇತರೆ ಕೆರೆಗಳಿಗೆ ಹರಿದು ಹೋಗುತ್ತದೆ. ಕೋಡಿಗಳ ಅಗಲ ೩೦ ರಿಂದ ೩೦೦ ಅಡಿಗಳವರೆಗೂ ಇರುತ್ತಿತ್ತು. ಉದಾಹರಣೆಗೆ ತುರುವೆಕೆರೆ ತಾಲೂಕಿನ ಕೊಂಡಜ್ಜಿ ಕೆರೆಯ ದಕ್ಷಿಣ ದಿಕ್ಕಿನ ಕೋಡಿ ಮತ್ತು ತುಯಲಹಳ್ಳಿಯ ಪಶ್ಚಿಮ ದಿಕ್ಕಿನ ಕೋಡಿಗಳ ಅಗಲ ಸುಮಾರು ೬೫ ಅಡಿಗಳಷ್ಟು ಇದೆ. ತುಯಲಹಳ್ಳಿ ಕೆರೆಯಲ್ಲಿ ಹೂಳು ತುಂಬಿರುವುದರಿಂದ ಈ ಕೆರೆಯ ಕೋಡಿಯ ರಚನೆ ಸ್ಪಷ್ಟವಾಗಿ ಕಂಡುಬಂದಿಲ್ಲ.

ಕೋಡಿಯ ಕಟ್ಟಡವನ್ನು ಬಲವಾಗಿ ಕಟ್ಟದಿದ್ದರೆ, ಕೋಡಿಯ ಮೇಲೆ ಹರಿಯುವ ನೀರಿನ ರಭಸಕ್ಕೆ ಎಲ್ಲವೂ ಕೊಚ್ಚಿಕೊಂಡು ಹೋಗುತ್ತವೆ. ಆದ್ದರಿಂದ ಕೋಡಿಗಳನ್ನು ಸುತ್ತಮುತ್ತ ಸಿಗುವ ದೊಡ್ಡ ದೊಡ್ಡ ಆಕಾರದ ಬಂಡೆಕಲ್ಲುಗಳಿಂದ ಭದ್ರಗೊಳಿಸಿದ್ದಾರೆ. ಸಾಮಾನ್ಯವಾಗಿ ಎಲ್ಲಾ ಕೆರೆಗಳ ಕೋಡಿಗಳ ಆಕಾರ ಚೌಕಕಾರವಾಗಿ ಕಂಡು ಬಂದರೆ, ಮಾಯಸಂದ್ರ ಹೋಬಳಿಯ ವೀರಸಾಗರ ಕೆರೆಯ ಕೋಡಿಯು ಅರ್ಧಚಂದ್ರಾಕೃತಿಯಲ್ಲಿ ಇದೆ. ಈ ರೀತಿಯಾದ ಕೋಡಿಗಳನ್ನು ಕೆರೆಗಳಿಗೆ ಅಳವಡಿಸುವುದರಿಂದ ಕೆರೆಯಲ್ಲಿ ತೇಲಿ ಬಂದ ಮೃಗಗಳ ಶವ, ಗಿಡ, ಗಂಟಿ, ಕಲ್ಮಷಗಳನ್ನು ಕೆರೆಯಿಂದ ಹೊರಗೆ ತಳ್ಳಿ ಕೆರೆಯನ್ನು ನಿರ್ಮಲಗೊಳಿಸುತ್ತವೆ. ಇಂತಹ

ಕೋಡಿಗಳನ್ನು ಕೆರೆಯ ತಗ್ಗಿನ ಬದಿಯಲ್ಲಿ ಒಂದು ಮಟ್ಟದ ಎತ್ತರದಲ್ಲಿ ನಿರ್ಮಿಸಿರುತ್ತಾರೆ. ಇದರ ಉದ್ದ ಎಷ್ಟು ಇರುತ್ತದೆಯೋ, ಅಷ್ಟೇ ಅಗಲವಿದ್ದು, ತಲೆ ಭಾಗಕ್ಕೆ ಮೂರು ಅಡಿಗೆ ಒಂದರಂತೆ ಜೋಡಿಸಲಾದ ಕಲ್ಲುಗಳು ಇವೆ. ಕೋಡಿಯ ಮುಂಭಾಗದಲ್ಲಿ ಒಂದು ಮತ್ತು ಮೂರು ಅಡಿ ಆಳದ ಗೋಡೆ ಇದ್ದು, ಮಣ್ಣಿನ ಗುಣಕ್ಕೆ ತಕ್ಕಂತೆ ಆಳ ಮತ್ತು ಅದಕ್ಕೆ ಅನುಗುಣವಾಗಿ ನಾಲ್ಕೂವರೆ ಅಡಿ ಮುಂಚಾಚುವಂತೆ ದೊಡ್ಡ ಕಲ್ಲುಗಳಿವೆ. ಕೋಡಿಗೆ ರಕ್ಷಣೆಯನ್ನು ಒದಗಿಸಲು ಕೋಡೆಯ ಪಕ್ಕದಲ್ಲಿ ಒರಟುಗಲ್ಲು ಮತ್ತು ಇಟ್ಟಿಗೆಗಳಿಂದ ಪಾರ್ಶ್ವಗೋಡೆಗಳನ್ನು ಕಟ್ಟಲಾಗಿದೆ. ಕೋಡಿಯ ಮೇಲೆ ಹರಿಯುವ ನೀರಿನ ರಭಸವನ್ನು ತಗ್ಗಿಸಲು ಗೋಡೆಯ ಕೆಳಪಾರ್ಶ್ವಕ್ಕೆ ಕಲ್ಲುಗಳನ್ನು ಸೂಕ್ತವಾದ ತಳಹದಿಯ ಮೇಲೆ ಇಳಿಜಾರಾದ ಹೊದಿಕೆಯಂತೆ ಕೋಡಿಯ ತಲೆಯಿಂದ ಕಂದರದ ಅಡಿಯವರೆಗೂ ಜೋಡಿಸಲಾಗಿದೆ. ಕೆಲವು ಕೋಡಿಗಳು ಕಂಬಗಳಿಂದ ಕೂಡಿವೆ. ಇದರಿಂದ ಕೆರೆಯು ಕೋಡಿ ಬಿದ್ದ ಸಂದರ್ಭಗಳಲ್ಲಿ ಈ ಕಂಬಗಳ ಮೂಲಕ ಕೆರೆ ಏರಿಯ ಒಂದು ತುದಿಯಿಂದ ಮತ್ತೊಂದು ತುದಿಗೆ ಹೋಗಲು ಅನುಕೂಲವಾಗುವಂತೆ ಅಳವಡಿಸಲಾಗಿದೆ. ಅಲ್ಲದೆ ಕೋಡಿಯ ಮೇಲೆ ಹರಿಯುವ ನೀರಿನ ವೇಗವನ್ನು ತಡೆಗಟ್ಟಿ ಕೋಡಿಗೆ ಆಗಬಹುದಾದ ಅಪಾಯವನ್ನು ತಪ್ಪಿಸುತ್ತದೆ. ಕೆರೆಯಲ್ಲಿ ಹೆಚ್ಚು ನೀರು ಸಂಗ್ರಹ ಮಾಡಬೇಕೆಂದಾಗ ಈ ಕಂಬಗಳ ಮಧ್ಯ ಉಸುಗಿನ ಚೀಲ, ಮರದ ತೊಪ್ಪಲು ಹಾಗೂ ಕೆಸರು ಮಣ್ಣಿನಿಂದ ಮುಚ್ಚಿ ನೀರನ್ನು ಶೇಖರಿಸುತ್ತಾರೆ.

ಉದಾಹರಣೆಗೆ:- ಕರ್ನಾಟಕದಲ್ಲಿ ಅತ್ಯಂತ ದೊಡ್ಡ ಕೋಡಿಯು ಶಿವಮೊಗ್ಗ ಜಿಲ್ಲೆಯ ಮದಗ ಮಾಸೂರು ಕೆರೆಯಲ್ಲಿ ಇದೆ.[೫]

ವಿಜಯನಗರ ಕಾಲದಲ್ಲಿ ಕೆಲವು ತಜ್ಞರು ಕೋಡಿಯನ್ನು ಕಟ್ಟುವುದರಲ್ಲಿಯೇ ಪರಿಣತಿಯನ್ನು ಹೊಂದಿದ್ದರು ಎಂಬುದಾಗಿ ಒಂದು ಶಾಸನವು ತಿಳಿಸುತ್ತದೆ. ವೆಂಕಟಪತಿರಾಯನ ಕಾಲದ ರುದ್ರಪ್ಪನಾಯಿಡು ಎಂಬಾತನು ಕೋಡಿಯನ್ನು ಕಟ್ಟುವುದರಲ್ಲಿ ಪರಿಣತಿಯನ್ನು ಹೊಂದಿದ್ದು ಅವನು ಕೊಲ್ಲೂರು ಕೆರೆಗೆ ಮೂವತ್ತುಮೂರು ಕಂಬಗಳಿರುವ ಕೋಡಿಗಳನ್ನು ನಿರ್ಮಿಸುತ್ತಾನೆಂದು ಶಾಸನವು ಉಲ್ಲೇಖಿಸಿದೆ.[೬] ತುರುವೇಕೆರೆ ಪರಿಸರದ ಹೆಚ್ಚಿನ ಕೆರೆಗಳ ಕೋಡಿಗಳು ದಪ್ಪ ದಪ್ಪ ಕಲ್ಲುಬಂಡಗಳಿಂದ ನಿರ್ಮಾಣವಾಗಿವೆ. ಕೆಲವು ಕೋಡಿಗಳು ಸಿಮೆಂಟ್ ಕಟ್ಟಡದ ಎತ್ತರವಾದ ಗೋಡೆಯಂತೆ ಕಂಡುಬಂದಿವೆ. ಇಂತಹ ಕೋಡಿಗಳಿಗೆ ಅನುಸಾರವಾಗಿ ತೂಬುಗಳನ್ನು ನಿರ್ಮಿಸಿರುತ್ತಾರೆ. ಇದರಿಂದ ಕೆರೆಯ ಹೆಚ್ಚುವರಿ ನೀರು ಈ ಕಟ್ಟಡದ ಮೇಲೆ ಹರಿದು ಹೋಗುತ್ತದೆ. ಕೆರೆಯಲ್ಲಿ ನೀರು ಕಡಿಮೆ ಇದ್ದಾಗ ತೂಬಿಗೆ ಅನುಗುಣವಾಗಿ ನಿರ್ಮಿಸಿದ ಕಾಲುವೆಗಳ ಮೂಲಕ ಆಯಕಟ್ಟು ಪ್ರದೇಶಗಳಿಗೆ ಮತ್ತು ವೆಚ್ಚವಾಗದಂತೆ ಬೇರೊಂದು ಕೆರೆಗೆ ಸೇರುವಂತೆ ನಿರ್ಮಿಸಿದ್ದಾರೆ. ಈ ರೀತಿಯಾದ ಕೆರೆಗಳ ಕೋಡಿಗಳ ರಚನೆ, ತುರುವೇಕೆರೆ, ಮಾಯಸಂದ್ರ ಮತ್ತು ಸಂಪಿಗೆ ಕೆರೆಗಳಲ್ಲಿ ಕಂಡುಬಂದಿದೆ.

## ಕೆರೆಗಳ ನಿರ್ವಹಣೆ

ಸ್ವಾತಂತ್ರ್ಯ ಪೂರ್ವದಲ್ಲಿಯ ಆಡಳಿತದಲ್ಲಿ ರಾಜನೇ ಶ್ರೇಷ್ಠ ಅಧಿಕಾರಿಯಾಗಿದ್ದನು. ನೀರಾವರಿ ವ್ಯವಸ್ಥೆಯು ಆತನ ಕೈ ಸೇರಿದ್ದರೂ, ಕೆರೆಗಳ ನಿರ್ಮಾಣ, ಸಂರಕ್ಷಣೆ ಮತ್ತು ನಿರ್ವಹಣೆಯಲ್ಲಿ ಮಂತ್ರಿಗಳು, ಸಂಧಿ ವಿಗ್ರಹಿಗಳು, ಊರಗೌಡರು, ಜಲ ಸೂತ್ರಧಾರರು, ಶ್ಯಾನುಭೋಗರು, ನೀರ್ಗಂಟಿಗಳು, ತಳವಾರರು, ಗ್ರಾಮಪಂಚಾಯಿತಿಯ ಪರಿಚರು ಮತ್ತು ಶ್ರೀಸಾಮಾನ್ಯರು ಪ್ರಮುಖ ಪಾತ್ರವಹಿಸುತ್ತಿದ್ದರು. ಅಧಿಕಾರ ವರ್ಗದವರು ಕೇವಲ ಕೆರೆಗಳನ್ನು ಕಟ್ಟುವಂತೆ ಹೇಳುತ್ತಿದ್ದರು. ಅವುಗಳನ್ನು ಕಟ್ಟುವವರು ಬೇರೆ ಜನಾಂಗದವರಾಗಿರುತ್ತಾರೆ. ಅಂತೆಯೇ ಪ್ರತಿಯೊಂದು ಪ್ರದೇಶದಲ್ಲಿಯೂ ಕೆರೆಯನ್ನು ಕಟ್ಟುವ ಮಣ್ಣು ವಡ್ಡರು, ಮುಂತಾದ ಅನುಭವಿಗಳು, ಕುಶಲಿಗಳು ಆದ ಕಸುಬುದಾರರಿದ್ದರು. ಕುಶಲರಲ್ಲದ ಕೂಲಿಗಳನ್ನು ಮಣ್ಣು ಕೆಲಸಕ್ಕೂ, ಕಲ್ಲು ಕೆಲಸಗಾರರನ್ನು ತೂಬು ರಚನೆಗೂ ನೇಮಿಸಿಕೊಂಡು ಕೆರೆಗಳನ್ನು ಕಟ್ಟಲಾಗುತ್ತಿತ್ತು ಎಂದು ಶಾಸನಗಳಿಂದ ತಿಳಿದುಬರುತ್ತದೆ.

ಉದಾ:- ಮಾಲೂರು ತಾಲೂಕಿನ ಟೇಕಲ್ ಶಾಸನ[೭] (೧೪೭೫) ಕೆರೆ ಒಡೆದುದನ್ನು ಮತ್ತೆ ಅದನ್ನು ಕಟ್ಟಲು ಸ್ಥಳೀಯ ಕೆಲಸದವನಿಗೆ ಹೇಳಿದುದನ್ನು ತಿಳಿಸುತ್ತದೆ. ಕೆರೆಯನ್ನು ಕಟ್ಟಿಸಿದ ನಂತರ ಆ ಕೆರೆಯನ್ನು ಕಟ್ಟಿಸಿದವರಿಗೆ ಕೆರೆಯ ಆಯಕಟ್ಟಿನ ಪ್ರದೇಶದಲ್ಲೆ ಭೂಮಿ(ಗದ್ದೆ)ಯನ್ನು ನೀಡುತ್ತಿದ್ದರು. ಕೆಲವೊಮ್ಮೆ ರಾಜನು ತಾನೇ ಸ್ವತಃ ಕೊಂಡುಕೊಂಡಿದ್ದ ಭೂಮಿಯನ್ನು ದಾನ ಮಾಡುತ್ತಿದ್ದನು. ಈ ವ್ಯವಸ್ಥೆ 'ಚಾಣುಕ್ಯ'ನ ಕಾಲದಿಂದಲೂ ಇದ್ದಿತೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.[೮]

ಕೆರೆಯ ನಿರ್ವಹಣೆ ಕಾರ್ಯವನ್ನು ಮೇಲಿನ ನಿರ್ವಾಹಕರುಗಳು ಮಾಡುತ್ತಿದ್ದರು. ಅವರಲ್ಲಿ ನೀರ್ಗಂಟಿಗಳು ಕೆರೆಯಿಂದ ನೀರನ್ನು ಆಯಕಟ್ಟು ಪ್ರದೇಶಗಳಿಗೆ, ತೂಬುಗಳನ್ನು ನಿಯಂತ್ರಿಸಿ, ಕಾಲುವೆಗಳ ಮುಖಾಂತರ ಹಾಯಿಸುತ್ತಿದ್ದರು. ಇವರ ಈ ಸೇವೆಗೆ ಪ್ರತಿಫಲವಾಗಿ ಆಯಕಟ್ಟಿನ ಉಪಯೋಗಕಾರರು ನಿರ್ದಿಷ್ಟ ವೇತನವನ್ನು ಧನ ಅಥವಾ ಧಾನ್ಯಗಳ ರೂಪದಲ್ಲಿ ನೀಡುತ್ತಿದ್ದರು. ಇಂದು ತುರುವೇಕೆರೆ ತಾಲೂಕಿನ ಕೆಲವು ಕೆರೆಗಳಿಗೆ ಹೇಮಾವತಿ ನಾತಿಯ ನೀರು ಬರುತ್ತಿದ್ದು, ಇವು ಸರ್ಕಾರದ ನೀರಾವರಿ ಇಲಾಖೆಯವರ ಅಧೀನದಲ್ಲಿವೆ. ಇವುಗಳ ಸಂರಕ್ಷಣಾ ಕಾರ್ಯವನ್ನು ಇಲಾಖೆಯವರೆ ಮಾಡುತ್ತಾ ಬಂದಿದ್ದಾರೆ. ಈ ಕೆರೆಗಳಿಂದ ನೀರನ್ನು ಕಿರಿಯ ಸಹಾಯಕರು ಆಯಕಟ್ಟು ಪ್ರದೇಶಗಳ ಜಮೀನಿಗೆ ಹಾಯಿಸುತ್ತಾರೆ. ಇವರುಗಳಿಗೆ ಸರ್ಕಾರವೇ ವೇತನವನ್ನು ನೀಡುತ್ತಲಿದೆ. ತಾಲೂಕಿನ ಕೆರೆಗಳಿಗೆ ಹೇಮಾವತಿ ನದಿಯ ನೀರು ಹರಿದು ಬರುವಾಗ ಅವರೊಂದಿಗೆ ಅಪಾರ ಪ್ರಮಾಣದಲ್ಲಿ ಮಣ್ಣು ಸಹ ನೀರಿನೊಡನೆ ಹರಿದು

ಬಂದು ಕೆರೆಗಳಲ್ಲಿ ಸಂಗ್ರಹವಾಗುತ್ತದೆ. ಈ ಕೆರೆಗಳ ಹೊಳೆತ್ತುವ ಕಾರ್ಯದ ಕಡೆ ಸರ್ಕಾರವು ಗಮನಹರಿಸಬೇಕು ಹಾಗೂ ಇನ್ನಿತರ ಕಾರ್ಯಗಳೆಂದರೆ, ಕೆರೆ ಏರಿ, ಮಳೆ ಅಥವಾ ಇತರೆ ಕಾರಣದಿಂದ ಹಾನಿಗೊಂಡಿದ್ದರೆ ಸರಿಪಡಿಸುವುದು, ತೂಬು ಮತ್ತು ಕೋಡಿ ನಾಶವಾಗಿದ್ದರೆ ಕಾಲಕಾಲಕ್ಕೆ ದುರಸ್ತಿ ಮಾಡಿಸುವುದು, ಕೆರೆಯಂಗಳವನ್ನು ಒತ್ತುವರಿಯಾಗದಂತೆ ರಕ್ಷಿಸುವುದು, ಕೆರೆಯ ಗಾತ್ರ ಅವಶ್ಯವಿದ್ದಲ್ಲಿ ವಿಸ್ತರಿಸುವುದು ಹಾಗೂ ಮೆಟ್ಟಿಲುಗಳನ್ನು ನಿರ್ಮಿಸುವುದು ಮತ್ತು ನೀರಿನ ಬಳಕೆ ಕುರಿತಾದ ವಿವಾದಗಳನ್ನು ಬಗೆಹರಿಸುವುದು. ಈ ಮೇಲಿನ ನಿರ್ವಹಣೆ ಕಾರ್ಯದಲ್ಲಿ ತೊಡಗಿದವರಿಗೆ ಕಂದಾಯ ರೂಪದಲ್ಲಿ ರಿಯಾಯ್ತಿ ಮತ್ತು ಭೂಮಿ ರೂಪದ ಕೊಡುಗೆಗಳನ್ನು ನೀಡುತ್ತಿರುವುದನ್ನು ಶಾಸನಗಳು ತಿಳಿಸಿವೆ.[೯] ಇಂದು ಕೆರೆಯ ಮೇಲೆ ತೆರಿಗೆಗಳನ್ನು ವಿಧಿಸಿ ಕೆರೆಗಳ ರಕ್ಷಣೆ ಮತ್ತು ನಿರ್ವಹಣಾ ಕಾರ್ಯಗಳಿಗೆ ಅವುಗಳನ್ನು ಬಳಸುತ್ತಿದ್ದರು.

ಒಂದು ಪ್ರದೇಶದಲ್ಲಿ ಕೆರೆಗಳನ್ನು ಕಟ್ಟುವ ಮೊದಲೇ ನೀರಿನ ಅವಶ್ಯಕತೆಯನ್ನು ಅರಿಯಬೇಕು. ಅದರಿಂದ ಕೆಲವರಿಗೆ ಯಾವ ರೀತಿ ಹಾನಿಯುಂಟಾಗುತ್ತದೆ? ಅದಕ್ಕೆ ಪರಿಹಾರವೇನು? ನೀರಿನ ನಿರ್ವಹಣೆಯಲ್ಲಿ ಜನರ ಪಾತ್ರವೇನು? ನೀರು ಹೆಚ್ಚಾಗಿ ಹರಿದು ಭೂಸತ್ವವು ಕಡಿಮೆಯಾದಾಗ ಅದಕ್ಕೆ ತಕ್ಕ ಪರಿಹಾರವೇನು? ಇತ್ಯಾದಿಗಳನ್ನು ತುರುವೇಕೆರೆಯ ಕ್ರಿ.ಶ. ೧೨೬೩ರ ಹೊಯ್ಸಳ ವೀರನರಸಿಂಹನ ಕಾಲದ ಶಾಸನದಲ್ಲಿ ವಿವರಿಸಲಾಗಿದೆ.[೧೦] ಈ ಶಾಸನವು ತುರುವೇಕೆರೆಯ ಚನ್ನಕೇಶವ ದೇವಾಲಯದ ಪೂರ್ವ ದಿಕ್ಕಿನ ತೊಲೆಕಲ್ಲಿನಲ್ಲಿದೆ. ನಂತರ ವಿಜಯನಗರ ಕಾಲಕ್ಕೆ ಸಂಬಂಧಿಸಿದಂತೆ ಕ್ರಿ.ಶ. ೧೫೪೯ರ ಪೋರುಮಾಮಿಲ್ಲಾ ಶಾಸನದಲ್ಲಿ ಕೆರೆ ನಿರ್ಮಾಣ ಹಂತದಲ್ಲಿನ ಅನೇಕ ಕಾರ್ಯಚರಣೆಗಳ ಬಗ್ಗೆ ಉಲ್ಲೇಖಿತವಾಗಿದೆ.

* ಹೊಸತಾಗಿ ಕೆರೆಕಟ್ಟುವಂತಹವರು ತಮ್ಮ ಊರ/ಹಳ್ಳಿಗಳ ಹಳ್ಳದ ಬಳಿ ಇರುವ ತಮ್ಮ ಭೂಮಿಗಳನ್ನೇ ಉಪಯೋಗಿಸಿಕೊಳ್ಳಬೇಕು.

* ಕಟ್ಟೆ ಕಿರುಗಟ್ಟೆಗಳನ್ನು ಕಟ್ಟುವಲ್ಲಿ ಮತ್ತೊಬ್ಬರ ಕ್ಷೇತ್ರಕ್ಕೆ ಹಾನಿ ಆಗದಂತೆ ಒಡಂಬಡಿಕೆ ಮಾಡಿಕೊಂಡು ಕಟ್ಟಬೇಕು.

* ಕೆರೆ ಎತ್ತರವನ್ನು ಹೆಚ್ಚಿಸುವಾಗ ಅದರ ಹಿನ್ನೀರಿನಿಂದ ಮುಳುಗುವ ಭೂಮಿಯನ್ನು ಹಾಗೆ ಮಾಡಬಾರದು ಎಂದು ತಡೆಯಬಾರದು. ಇಂತಹ ಸಮಯದಲ್ಲಿ ಹೇಗೆ ಸಮಸ್ಯೆ ಬಗೆಹರಿಸಿಕೊಳ್ಳಬೇಕೆನ್ನುವುದನ್ನು ಉದಾಹರಣೆ ಸಹಿತವಾಗಿ ಹೀಗೆ ಹೇಳಿದ್ದಾರೆ. ಅಯ್ಯರಸನ ಕೆರೆಯ ಎತ್ತರವನ್ನು ಹೆಚ್ಚಿಸಿದರೆ ಅವರ ನಿರೊತ್ತಿನಿಂದ ಅರಳಿ ಕೆರೆಯ ನೀರು ಹೆಚ್ಚಾಗಿ ಕೆರೆಯ ಹಿಂದಿನ ಗದ್ದೆಗಳಿಗೆ ಮುಳುಗಡೆಯಾಗುತ್ತದೆ. ಆಡನಹಳ್ಳಿಯಲ್ಲಿರುವ ಮೊದಲ ತೋಟದ ತುದಿಯ ಬಯಲಿನಲ್ಲಿರುವಂತಹ ಜಾಗದಲ್ಲಿ ಮಹಾಜನರು ರಾಜಗಟ್ಟೆ ಕಟ್ಟಿಸಬೇಕು.

ಅದರ ಎರಡೂ ಕೋಡಿಗಳಿಂದ ಹರಿದು ಬರುವ ನೀರು ಗದ್ದೆ ಸ್ಥಳಕ್ಕೆ ಬಂದು ಅವರು ತಮ್ಮ ಬೆದ್ದಲಿಗೆ ಬದಲಾಗಿ ತಾಳಕೆರೆಯ ಹೊಲಗಳನ್ನು ತೆಗೆದುಕೊಳ್ಳುವರು. ಕೆಂಚನಕಟ್ಟೆಯವರು ಅವರ ಕೆರೆಯನ್ನು ತಾವೇ ಕಟ್ಟಿಕೊಳ್ಳಬೇಕು. ರಾಜಘಟ್ಟದವರು ಕಟ್ಟಿಸಿ ನೀರನ್ನು ಹರಿಸಿಕೊಂಡ ಪಕ್ಷಕ್ಕೆ ಕೆಂಚನಕಟ್ಟೆಯವರು ಕಟ್ಟೆಕಟ್ಟಿಸದೆ, ರಾಜಘಟ್ಟದ ಕೋಡಿಯ ನೀರನ್ನು ಹರಿಸಿಕೊಂಡರೆ ಖಂಡುಗ ಒಂದಕ್ಕೆ ಒಂದು ಹೊನ್ನು ಮತ್ತು ೫೦ ಗದ್ಯಾಣಗಳನ್ನು ಅವರು ಅಗ್ರಹಾರದ ಮಹಾಜನಗಳಿಗೆ ಕೊಡಬೇಕು.

* ಕೆರೆಕಟ್ಟುವ ಮುನ್ನವೇ ಇದ್ದ ಬಂಡೀದಾರಿಗಳನ್ನು ಹಾಗೆಯೇ ಬಿಡಬೇಕು. ಆ ಜಾಗವನ್ನು ನಮ್ಮದು ಅಥವಾ ತಮ್ಮದು ಎಂದು ಜಗಳವಾಡಬಾರದು.

* ಪ್ರಜೆಗಳು ಸೋಮನಾಥ ಸಮುದ್ರದ ಎರಡು ಕೋಡಿಗಳ ಕಾಲುವೆಯ ಮಾರ್ಗದ ಮೂಲಕ ನೀರು ಹರಿಯುವ ಸ್ಥಳದಲ್ಲಿ ಕೋಡಿ ಬಿಟ್ಟು, ಉಳಿದ ಒಣ ಭೂಮಿಗೆ ಹಾನಿಯುಂಟಾದರೆ ಅದು ಚೌಳಿನಿಂದ ಕೂಡಿ ವ್ಯವಸಾಯಕ್ಕೆ ಹಾನಿಯುಂಟು ಮಾಡುವ ಸಂದರ್ಭದಲ್ಲಿ ಮಹಾಜನರು ಅವರಿಗೆ ಆದ್ಯತೆಯ ಮೇಲೆ ಅವರವರ ಭೂಮಿಗೆ ತಕ್ಕ ಪ್ರತಿಯಾಗಿ ಬೇರೆ ಭೂಮಿಯನ್ನು ಸೋಮನಾಥ ಸಮುದ್ರದ ಜನರಿಗೆ ಕೊಡಬೇಕು.

* ಪ್ರಜೆಗಳಿಗೆ ಯಾವ ತೊಡಕುಗಳು ಬಂದರೂ ತುರುವೇಕೆರೆ ಅಗ್ರಹಾರದ ಮಹಾಜನಗಳು ನ್ಯಾಯ ಸಮ್ಮತವಾದ ತೀರ್ಮಾನವನ್ನು ಕೊಡುತ್ತಾರೆ.

* ಪ್ರತಿ ಗೃಹಸ್ಥರೂ ಮಾಳಿಗೆ ಮನೆಯನ್ನು ಕಟ್ಟುವಾಗ, ಬಾವಿ ಬಚ್ಚಲುಗಳನ್ನು ಕಟ್ಟುವಾಗ, ಕೆರೆಕಟ್ಟೆಗಳ ದುರಸ್ತಿಗೆ ಬೇಕಾಗುವ ಕಲ್ಲುಗಳನ್ನು ಒದಗಿಸಬೇಕು. ಅಲ್ಲದೆ ಕೆರೆಗೆ ಹೆಚ್ಚುವರಿ ನೀರು ಬಂದಾಗ, ಹಾನಿಯುಂಟಾದಾಗ, ಅವುಗಳಲ್ಲಿ ಕೊರಕಲು ಇತ್ಯಾದಿ ಉಂಟಾದಾಗ ದುರಸ್ತಿಗೆ ಸಹಾಯ ಮಾಡುವುದಿಲ್ಲ ಎಂದು ಹೇಳಬಾರದು.

* ಈ ಶಾಸನವನ್ನು ಮೀರಿದೊಡೆ ಚಕ್ರವರ್ತಿ ವೀರನರಸಿಂಹ ದೇವರ ಆಣೆ, ಸೋವಣ್ಣ ದಂಡನಾಯಕರ ಆಣೆ, ಅಶೇಷ ಮಹಾಜನಗಳ ಸಾಕ್ಷಿಯಾಗಿ ತಮ್ಮ ತಮ್ಮ ಮಾತಾಪಿತೃಗಳ ಆಣೆಯಾಗಿ ತಮ್ಮ ಇಷ್ಟದೇವತೆಯ ಆಣೆಯಾಗಿ ಪಾಲಿಸತಕ್ಕದ್ದು.

* ಇದನ್ನು ತಪ್ಪದಂತೆ ನಡೆಸಿಕೊಡುತ್ತೇವೆ. ಎನ್ನಲು ತುರುವೇಕೆರೆಯ "ಮಹಾಜನರು" ಶ್ರೀ ಪ್ರಸನ್ನ ದೇವರ ಹೆಸರಿನಲ್ಲಿ ಸಾಕ್ಷಿ ನೀಡುತ್ತಿದ್ದೇವೆ. ತುರುವೇಕೆರೆಯ ಈ ಶಾಸನಗಳಿಂದ ತಿಳಿದು ಬರುವ ಅಂಶಗಳನ್ನು ಈ ರೀತಿಯಾಗಿ ವಿಶ್ಲೇಷಿಸಲಾಗಿದೆ.

ಜಲ ಆಕರಗಳ ನಿರ್ಮಾಣಕ್ಕೆ ಬೇಕಾಗುವ ಭೂಮಿಯ ಆಯ್ಕೆ, ಕೆರೆಕಟ್ಟೆ, ಕೋಡಿ ಕಟ್ಟಲು ಬೇಕಾಗುವ ಪರಿಕರ ಸಾಮಗ್ರಿಗಳನ್ನು ಪ್ರಾದೇಶಿಕವಾಗಿ, ವೈಯಕ್ತಿಕ ಮತ್ತು ಸಾಮೂಹಿಕ

ನೆಲೆಗಳಲ್ಲಿ ಊರೊಟ್ಟಿನ ಹಿತಕ್ಕಾಗಿ ದೊರಕಿಸಿಕೊಳ್ಳಬೇಕೆಂಬ ಸಾಮಾಜಿಕ ಚಿಂತನೆ ಈ ಶಾಸನದಲ್ಲಿ ಉಲ್ಲೇಖವಾಗಿದೆ. ಮತ್ತು ನೀರಿನ ಸಮರ್ಥ ನಿರ್ವಹಣೆ ಮತ್ತು ಬಳಕೆಗೆ ಬೇಕಾಗುವ ಆತ್ಮಸಾಕ್ಷಿ ಹಾಗೂ ಅರಸನ ಆಜ್ಞೆಯನ್ನು ಒಳಗೊಂಡ ನಿರ್ಣಯಗಳು ಸರ್ವಸಮ್ಮತವಾಗಿರಬೇಕೆಂಬ ಆಶಯವನ್ನು ಈ ಶಾಸನವು ತಿಳಿಸಿದೆ. ಅಂದರೆ ರಾಜರು, ದಂಡನಾಯಕರಿಂದ ಮೊದಲಾಗಿ ಫಲಾನುಭವಿಗಳಾದ ಸಾಮಾನ್ಯ ಜನರು ಕಷ್ಟನಿಷ್ಠುರಗಳನ್ನು ಸಮನಾಗಿ ಹಂಚಿಕೊಳ್ಳಬೇಕೆನ್ನುವ 'ಸಹಕಾರಿ ತತ್ವ'ಕ್ಕೆ ಈ ಶಾಸನವು ಸಾಕ್ಷಿಯಾಗಿದೆ. ಅಲ್ಲದೆ ಕೆರೆಯ ಎತ್ತರವನ್ನು ಹೆಚ್ಚಿಸುತ್ತಿದ್ದರೆನ್ನುವ ತಾಂತ್ರಿಕತೆ ಇದೆ. ಹೀಗೆ ಏರಿಯ ಎತ್ತರ ಹೆಚ್ಚಿಸಿದಾಗ ಹಿನ್ನೀರಿನಲ್ಲಿ ಮುಳುಗುವ ಜಮೀನಿಗೆ ಬದಲಾಗಿ ಪರಿಹಾರ ರೂಪದಲ್ಲಿ ಬೇರೆ ಜಮೀನು ಕೊಡಬೇಕೆನ್ನುವ ಸಾಮಾಜಿಕ ಕಳಕಳಿ ಈ ಶಾಸನದಲ್ಲಿದೆ.

ತುರುವೇಕೆರೆ ಶಾಸನಗಳಲ್ಲಿ ಬರೆದಿರುವ ಊರುಗಳ ಹೆಸರುಗಳನ್ನು "ಭಾರತೀಯ ಸರ್ವೇಕ್ಷಣೆ" ಭೂ ನಕ್ಷೆಯಲ್ಲಿ ಅಳವಡಿಸಿದಾಗ ತಿಳಿದು ಬರುವ ವಿಷಯಗಳು ಹೀಗಿವೆ.[೧೧]

ತುರುವೇಕೆರೆಯಿಂದ ಮಾವಿನಹಳ್ಳಿಯವರೆಗಿನ ೧೬.೨೫ ಕಿಲೋಮೀಟರ್ ಸಾಗುವಳಿ ಭೂಮಿ ಸರಣಿ ಕೆರೆಗಳ ವ್ಯಾಪ್ತಿಗೆ ಬರುತ್ತದೆ ಮತ್ತು ಭೂಮಿಯ ಇಳಿಜಾರು ಪ್ರದೇಶದ ಕಾಂಟೂರುಗಳು ೮೧೨ ರಿಂದ ೮೦೦ ಇದ್ದು ನೀರಿನ ಗುರುತ್ವಾಕರ್ಷಣೆಯ ತತ್ವವನ್ನು ಅರಿತು ಇಳಿಜಾರಿಗೆ ಸರಿ ಹೊಂದುವಂತೆ ಕೆರೆಗಳನ್ನು ನಿರ್ಮಿಸಿದ್ದಾರೆ. ಹಾಗೂ ಎರಡು ಕೆರೆಕೋಡಿಗಳಿಂದ ಬಂದ ನೀರನ್ನು ಸೇರಿಸಲೆಂದೇ "ರಾಜಗಟ್ಟೆ" ಯೊಂದನ್ನು ನಿರ್ಮಿಸಬೇಕೆನ್ನುವ ಬಾಣಸಂದ್ರ ಬೆಟ್ಟಗಳ ಸಾಲುಗಳಲ್ಲಿ ಸರಣಿ ಕೆರೆಗಳನ್ನು ಒಂದಕ್ಕೊಂದು ಸೇರಿಸುವ "ಲಿಂಕ್" ವ್ಯವಸ್ಥೆಯ ತಾಂತ್ರಿಕತೆ ಕಂಡು ಬರುತ್ತದೆ.

ಈ ಮೇಲಿನ ನಿಯಮಗಳನ್ನು ಈಗಿನ ಪರಿಸ್ಥಿತಿಗೆ ತಕ್ಕಂತೆ ಪರಿಷ್ಕರಿಸಿ ಬಳಸಿಕೊಂಡರೆ, ಗ್ರಾಮಗಳ ಮತ್ತು ರಾಜ್ಯಗಳ ನಡುವೆ ಇರುವ ಜಲ ವಿವಾದಗಳನ್ನು ಬಗೆಹರಿಸುತ್ತವೆ ಎನ್ನಬಹುದು.

**ತುರುವೇಕೆರೆ ಪರಿಸರದ ಕೆಲವು ಪ್ರಮುಖ ಕೆರೆಗಳು**

**ತುರುವೇಕೆರೆ ಕೆರೆ**

ಹೊಯ್ಸಳ ಕಾಲದ ಕೆರೆಗಳಲ್ಲಿ ತುರುವೇಕೆರೆ ಕೆರೆಯು ಒಂದಾಗಿದೆ. ಈ ನಗರಕ್ಕೆ ಹಿಂದೆ 'ವಿಜಯ ನರಸಿಂಹಪುರ' ಎಂಬ ಹೆಸರಿದ್ದು, ನಂತರ ತುರುವೇಕೆರೆ ಎಂದಾಗಿದೆ. ತುರುವೇಕೆರೆ ನಗರವು ಬೆಂಗಳೂರು ಮತ್ತು ಪುಣೆ ರೈಲು ಮಾರ್ಗದಲ್ಲಿರುವ ಬಾಣಸಂದ್ರ ರೈಲು ನಿಲ್ದಾಣದ ದಕ್ಷಿಣಕ್ಕೆ ೧೩ ಕಿ.ಮೀ. ದೂರದಲ್ಲಿದೆ. ಕೆರೆಯು ನಗರದ ಉತ್ತರ ದಿಕ್ಕಿಗೆ ಇದೆ. ಈ ಕೆರೆಯ ದಕ್ಷಿಣಕ್ಕೆ ಹೊಯ್ಸಳರ ಕಾಲದ ಶ್ರೇಷ್ಠ ವಾಸ್ತುಶಿಲ್ಪದ ಪ್ರತೀಕವಾದ ಮೂಲ ಶಂಕರೇಶ್ವರ ದೇವಾಲಯವಿದೆ.

೧೩ನೇ ಶತಮಾನದಲ್ಲಿ ಹೊಯ್ಸಳ ೩ನೇ ನರಸಿಂಹನ ದಂಡನಾಯಕ ಸೋವಣ್ಣ ಈ ಊರನ್ನು ೧೨೬೮ರಲ್ಲಿ "ಸರ್ವಜ್ಞ ಶ್ರೀ ವಿಜಯನರಸಿಂಹಪುರ" ಎಂಬ ಹೆಸರಿನಿಂದ ಬ್ರಾಹ್ಮಣರಿಗೆ ಅಗ್ರಹಾರವಾಗಿ ಕೊಟ್ಟುದಾಗಿ ಶಾಸನಗಳಿಂದ ತಿಳಿದುಬರುತ್ತದೆ.[೧೨] ಇಲ್ಲಿನ ಕೆರೆಯು ಇವರ ಕಾಲದಲ್ಲಿ ನಿರ್ಮಾಣವಾದಂತಿದೆ. ಹೊಯ್ಸಳ ರಾಜನರಸಿಂಹ ಅರಸನ ಹೆಂಡತಿಯರಾದ ಲೋಕಮ್ಮ ಹಾಗೂ ಲೋಕಾಂಬಿಕಾ ಈ ಕೆರೆಗೆ 'ರಾಯಕೆರೆ' ಎಂದು ಪುನರ್‌ನಾಮ ಇಟ್ಟು ಅದನ್ನು ವಿಸ್ತಾರಗೊಳಿಸಿದರು.[೧೩] ನಂತರ ೧೬ನೇ ಶತಮಾನದಲ್ಲಿ ಹಾಗಲವಾಡಿಯ ಸಳನಾಯಕ ತುರುವೇಕೆರೆಯನ್ನು ಗೆದ್ದು, ತನ್ನ ಸೋದರರನಾದ ಚಿಕ್ಕನಾಯಕ, ಅಣ್ಣಾನಾಯಕನ ವಶಕ್ಕೆ ಕೊಟ್ಟನು. ಅವರು ಕೋಟೆ ಕಟ್ಟಿಸಿ, ಕೆರೆ ವಿಸ್ತಾರಿಸಿದರೆಂದು ತಿಳಿದುಬಂದಿದೆ.[೧೪]

ಕೆರೆಯು ಹಿಂದಿನಿಂದಲೂ ಮಳೆಯ ನೀರನ್ನು ಆಶ್ರಯಿಸಿತ್ತು. ನಂತರ ಕಾಲದಲ್ಲಿ ಹೇಮಾವತಿ ನಾಲೆಯ ನೀರು ಮಲ್ಲಾಘಟ್ಟ ಕೆರೆಯಿಂದ ಹರಿದು ಬರುತ್ತದೆ. ೧೭೯.೧೬ (ಟಿ.ಎಂ.ಸಿ) ಪ್ರಮಾಣದಷ್ಟು ನೀರಿನ ಸಂಗ್ರಹಣ ಸಾಮರ್ಥ್ಯವನ್ನು ಹೊಂದಿದೆ. ಕೆರೆಯ ಜಲವಿಸ್ತೀರ್ಣ ೨೭೪ ಹೆಕ್ಟೇರ್ ಮತ್ತು ಅಚ್ಚುಕಟ್ಟು ಪ್ರದೇಶ ೨೮೫ ಹೆಕ್ಟೇರ್‌ಗಳು. ಈ ಕೆರೆಯಲ್ಲಿ ಎರಡು ಕೋಡಿ ಮತ್ತು ಎರಡು ತೂಬುಗಳು ಇವೆ. ಒಂದು ತೂಬನ್ನು ದಕ್ಷಿಣ ಭಾಗದ ಕೋಡಿಗೆ ಜೋಡಿಸಲಾಗಿದೆ. ಈ ತೂಬನ್ನು ಜೀರ್ಣೋದ್ಧಾರ ಮಾಡಿದಂತಿದೆ. ಮತ್ತೊಂದು ತೂಬನ್ನು ಕೆರೆಯ ಉತ್ತರ ಭಾಗದ ಕೋಡಿಯ ೯೦ ಅಡಿ ದೂರದಲ್ಲಿ ನಿರ್ಮಿಸಲಾಗಿದೆ. ಇದು ಮರದ ದಿಮ್ಮಿಯಿಂದ ರಚನೆಯಾಗಿದೆ. ಕೆರೆಯ ದಕ್ಷಿಣ ಭಾಗದ ಕೋಡಿ ಹತ್ತಿರ ಕೋಡಿ ಬಸವೇಶ್ವರ ದೇವಸ್ಥಾನವಿದೆ. ಈ ಕೋಡಿಗೆ ಹೊಂದಿಕೊಂಡಂತೆ ಒಂದು ತೂಬನ್ನು ನಿರ್ಮಾಣ ಮಾಡಲಾಗಿದೆ. ತೂಬಿನ ಹೊರಭಾಗದ ಇಳಿಜಾರಿನಲ್ಲಿ ಕಾಲುವೆಗೆ ಸೇರಿಸಲಾಗಿದೆ. ಅಚ್ಚುಕಟ್ಟು ಪ್ರದೇಶಕ್ಕೆ ಈ ಕಾಲುವೆಗಳಿಂದ ನೀರು ಸಮರ್ಪಕವಾಗಿ ಹರಿದು ಹೋಗುತ್ತದೆ.

ಕೆರೆಯ ಏರಿಯ ಉತ್ತರ ದಕ್ಷಿಣಾಭಿಮುಖವಾಗಿದ್ದು, ಕೆರೆಯಿಂದ ಪೂರ್ವದಿಕ್ಕಿದೆ. ಈ ಪ್ರದೇಶದಲ್ಲಿ ಬಿದ್ದ ಮಳೆಯು ಸಣ್ಣ ತೊರೆಗಳಾಗಿ ಪೂರ್ವ ಭಾಗಕ್ಕೆ ಹರಿಯುತ್ತದೆ. ಕೆರೆಯಲ್ಲಿ ನೀರನ್ನು ಸಂಗ್ರಹಿಸಲು ಪೂರ್ವ ಭಾಗಕ್ಕೆ ಏರಿಯನ್ನು ಕಟ್ಟಲಾಗಿದೆ. ಏರಿಯ ಉದ್ದ ೯೬೦ ಮೀ., ಅಗಲ ೪ ಮೀ. ಇದೆ. ಇದು ಮಣ್ಣಿನ ಏರಿಯೇ ಆದರೂ ಹೊಳೆಗೆ ಅಭಿಮುಖವಾದ ಪಾರ್ಶ್ವದಲ್ಲಿ ಕಲ್ಲುಗಳಿಂದ ಕಟ್ಟಲಾದ ಅಂದವಾದ ಕಟ್ಟಡವನ್ನು ನೋಡಿದರೆ ಇದೊಂದು ಕಲ್ಲು ಕಟ್ಟಡದ ಕೆರೆ ಎನಿಸುತ್ತದೆ. ಈ ಕೆರೆಗೆ ಎರಡು ಕಾಲುವೆಗಳಿದ್ದು, ಅವುಗಳಿಂದ ಅಚ್ಚುಕಟ್ಟು ಪ್ರದೇಶಕ್ಕೆ ನೀರನ್ನು ಹಾಯಿಸಿ ಬೇಸಾಯಕ್ಕೆ ಬಳಸಿ ಅಧಿಕ ಕೃಷಿಯನ್ನು ಪಡೆಯುತ್ತಿದ್ದರು. ಅಲ್ಲಿ ಮುಖ್ಯವಾಗಿ ಭತ್ತ ಗದ್ದೆ, ಕಬ್ಬು ಮತ್ತು ತೆಂಗಿನ ತೋಟಗಳು ಇದ್ದವು. ಮೀನು ಸಾಕಣಿಕೆಗೆ ಕೆರೆಯ ನೀರು ಬಳಕೆಯಾಗುತ್ತದೆ. ಕೆರೆಯಲ್ಲಿ ಬಹಳ ಹಿಂದಿನಿಂದಲೂ ಹೂಳೆತ್ತುವ ಕಾರ್ಯ

ನಡೆಯುತ್ತಿದ್ದು, ಹೆಚ್ಚು ನೀರನ್ನು ಸಂಗ್ರಹಿಸುವ ಸಾಮರ್ಥ್ಯ ಹೊಂದಿದೆ. ಈ ಕೆರೆಯು ನೀರಾವರಿ ಇಲಾಖೆಯಿಂದ ರಕ್ಷಣೆ ಪಡೆದಿದ್ದು, ವಿಲೇವಾರಿಯಾಗುತ್ತಿದೆ.

### ಮಾಯಸಂದ್ರ ಕೆರೆ

ಮಾಯಸಂದ್ರ ಕೆರೆಯು ತುರುವೇಕೆರೆ ಪರಿಸರದ ಕೆರೆಗಳಲ್ಲಿ ಒಂದಾಗಿದೆ. ತಾಲೂಕಿನಿಂದ ೧೨ ಕಿ.ಮೀ. ದೂರದಲ್ಲಿದೆ. ಮಾಯಸಂದ್ರ ಎಂಬ ಹೆಸರು ಬರಲು ಕೆರೆಯ ಏರಿಯ ಮಧ್ಯ ಭಾಗದಲ್ಲಿರುವ ಮಾಯಮ್ಮದೇವಿ ಮತ್ತು ಜಲಾಯನ ಪ್ರದೇಶ ಸೇರಿ ಮಾಯಸಂದ್ರ ಎಂದಾಗಿದೆ. ಈ ಕೆರೆಯನ್ನು ಯಾರು ಕಟ್ಟಿದರು ಎಂಬುದಕ್ಕೆ ಯಾವುದೇ ಮಾಹಿತಿಗಳು ದೊರಕಿಲ್ಲ. ಕೆರೆಯ ರಚನೆಯನ್ನು ನೋಡಿದಾಗ ಇದು ಹೊಯ್ಸಳ ಕಾಲದಲ್ಲಿ ನಿರ್ಮಾಣವಾಗಿರುವಂತೆ ಕಂಡುಬರುತ್ತದೆ. ಗ್ರಾಮದ ಉತ್ತರ ದಿಕ್ಕಿಗೆ ಕೆರೆ ಇದೆ. ಕೆರೆಯ ಏರಿಯು ಉತ್ತರ ದಕ್ಷಿಣಾಭಿಮುಖವಾಗಿದ್ದು, ಕೆರೆಯಿಂದ ಪೂರ್ವ ದಿಕ್ಕಿಗೆ ಇದೆ. ಏರಿಯ ಉದ್ದ ೧೨೫೦ ಮೀ. ಇದ್ದು, ಅಗಲ ೩ ಮೀ. ಮತ್ತು ಎತ್ತರ ೧೦ ಮೀ. ಇದೆ. ಕೆರೆಯಾ ಏರಿಯೂ ಅಂಕುಡೊಂಕಾಗಿ ಇದ್ದು, ಕೊನೆಯ ಭಾಗವು ವೃತ್ತಾಕಾರವಾಗಿ ರಚನೆಯಾಗಿದೆ. ಏರಿಯ ಒಳ ಪಾರ್ಶ್ವವನ್ನು ದಪ್ಪ ದಪ್ಪ ಕಲ್ಲುಗಳಿಂದ ಜೋಡಿಸಿ ಕಲ್ಲುಕಟ್ಟಡದಂತೆ ನಿರ್ಮಿಸಿದ್ದಾರೆ. ಹೊರಭಾಗವು ಮಣ್ಣಿನಿಂದ ನಿರ್ಮಾಣವಾಗಿದೆ. ಕೆರೆಯ ಉತ್ತರದ ಕೋಡಿ ಹತ್ತಿರ ಕೋಡಿ ಬಸವೇಶ್ವರ ದೇವಸ್ಥಾನವಿದೆ. ಏರಿಯ ಮಧ್ಯದಲ್ಲಿ ಮಾಯಮ್ಮನ ಗುಡಿ ಇದೆ. ಉತ್ತರ ದಿಕ್ಕಿನ ಏರಿಯ ಪಕ್ಕದಲ್ಲಿ ಊರಿನ ಮೂಲ ದೇವತೆಯಾದ ಕೊಲ್ಲಪುರದಮ್ಮನ ದೇವಸ್ಥಾನವಿದೆ.

ಈ ಕೆರೆಯ ಬಗ್ಗೆ ಒಂದು ಕಥೆ ಇದೆ. ಕೆರೆಯಲ್ಲಿ ದೇವ ಕನ್ಯೆಯರು ವಾಸವಾಗಿದ್ದಾರೆ. ಮಾಯಮ್ಮ ದೇವಿಯೂ ಗಂಗೆ ಕುಲದ ಅಧಿದೇವತೆಯಾಗಿದ್ದು, ಏರಿಯ ಮಧ್ಯದಲ್ಲಿ ಕುಳಿತು ತನ್ನ ಏಳು ಜನ ಮಕ್ಕಳು ಬರುವಿಕೆಯನ್ನು ಕಾಯುತ್ತಿದ್ದಾಳೆ ಎಂಬ ನಂಬಿಕೆ ಇದೆ.

ದಕ್ಷಿಣ ದಿಕ್ಕಿನ ಏರಿಯ ಹಿಂಭಾಗದಲ್ಲಿ ರಾಮದೇವರ ಗುಡಿ, ವೀರಭದ್ರಸ್ವಾಮಿ, ಆಂಜನೇಯ ಮತ್ತು ಮಾರಮ್ಮನ ದೇವಸ್ಥಾನಗಳು ಹಾಗೂ ಅನೇಕ ಮಂಟಪಗಳು ಇವೆ. ಈ ಸ್ಥಳವನ್ನು ಹಳೇ ಊರು ಎನ್ನುವರು. ಈ ದೇವಸ್ಥಾನಗಳ ಒಳಗೆ ವಿಗ್ರಹಗಳಿಲ್ಲ. ಇಲ್ಲಿನ ಮೂಲ ಮೂರ್ತಿಗಳನ್ನು ಮಾಯಸಂದ್ರ ಗ್ರಾಮದ ದೇವಸ್ಥಾನದಲ್ಲಿ ಇಡಲಾಗಿದೆ. ಮೊದಲು ಕೆರೆ ಹಿಂಭಾಗದಲ್ಲಿ ಊರು ಇದ್ದು, ಕ್ರಮೇಣ ಪ್ಲೇಗ್ ರೋಗದಿಂದ ಊರನ್ನು ಬದಲಾವಣೆ ಮಾಡಿದ್ದಾರೆ ಎಂಬುದಾಗಿ ತಿಳಿದುಬರುತ್ತದೆ.

ಈ ಕೆರೆಗೆ ಹೇಮಾವತಿ ನಾಲೆಯ ನೀರು ಹರಿದು ಬರುತ್ತದೆ. ೧೭೧.೭೩ರಷ್ಟು ಕೆರೆಯು ನೀರಿನ ಸಂಗ್ರಹಣ ಸಾಮರ್ಥ್ಯ ಹೊಂದಿದೆ. ಜಲವಿಸ್ತೀರ್ಣ ೨೧೦ ಹೆಕ್ಟೇರ್ ಇದ್ದು, ೨೮೯.೩೬

ಹೆಕ್ಟೇರ್ ಅಚ್ಚುಕಟ್ಟು ಪ್ರದೇಶಗಳಿಗೆ ನೀರನ್ನು ಪೂರೈಸುತ್ತದೆ. ಕೆರೆಯಲ್ಲಿ ನಾಲ್ಕು ತೂಬುಗಳನ್ನು ವಿವಿಧ ಎತ್ತರಗಳಲ್ಲಿ ನಿರ್ಮಿಸಲಾಗಿದೆ. ಇವುಗಳಲ್ಲಿ ಮೂರು ಕಾರ್ಯಾಚರಣೆಯಲ್ಲಿವೆ. ಒಂದು ಅವನತಿ ಹೊಂದಿದೆ. ಅದರಲ್ಲಿ ಒಂದು ತೂಬು ದಕ್ಷಿಣ ಕೋಡಿಯಿಂದ ೧೩ ಅಡಿ ದೂರದಲ್ಲಿದೆ. ಮತ್ತೊಂದು ತೂಬನ್ನು ಏರಿಗೆ ಅಳವಡಿಸಿ ಮತ್ತು ಕೊನೆಯ ತೂಬನ್ನು ಉತ್ತರ ದಿಕ್ಕಿನ ಏರಿಯಿಂದ ೧೫ ಅಡಿ ಅಂತರ ಇದೆ. ಏರಿಗೆ ಹೊಂದಿಕೊಂಡಂತೆ ಮೂರು ಕಾಲುವೆಗಳಿದ್ದು, ಒಂದು ಮುಚ್ಚಿದಂತಿದೆ. ಈ ಕಾಲುವೆಗಳ ಮೂಲಕ ಅಚ್ಚುಕಟ್ಟು ಪ್ರದೇಶಕ್ಕೆ ನೀರನ್ನು ಹಾಯಿಸಿ ಭತ್ತ, ತೆಂಗು, ಬಾಳೆ ಮುಂತಾದವುಗಳನ್ನು ಸರ್ವಕಾಲದಲ್ಲಿಯೂ ಬೆಳೆಯುತ್ತಾರೆ. ಕೆರೆಯ ಉತ್ತರ ಮತ್ತು ದಕ್ಷಿಣ ದಿಕ್ಕಿಗೆ ಎರಡು ಕೋಡಿಗಳಿವೆ. ಇವುಗಳಿಂದ ಕೆರೆಯ ಹೆಚ್ಚುವರಿ ನೀರು ಹರಿದು ಜಡೆಯ ಕೆರೆಯನ್ನು ಸೇರುತ್ತದೆ. ಮೀನುಗಾರಿಕೆಗೆ ಕೆರೆಯು ಅನುಕೂಲಕರವಾಗಿದ್ದು, ವಾರ್ಷಿಕವಾಗಿ ವಿಲೇವಾರಿಯಾಗುತ್ತಿದೆ. ಈ ಕೆರೆಯಲ್ಲಿ ಹೂಳೆತ್ತುವ ಕಾರ್ಯ ನಡೆದು, ಕೆರೆಯು ತನ್ನ ಆಳ ಮತ್ತು ಅಗಲವನ್ನು ಹೆಚ್ಚಿಸಿಕೊಂಡಿದೆ. ನೀರಾವರಿ ಇಲಾಖೆಯಿಂದ ರಕ್ಷಣೆಯನ್ನು ಪಡೆದಿದೆ.

### ಮಲ್ಲಾಘಟ್ಟ ಕೆರೆ

ಮಲ್ಲಾಘಟ್ಟ ಕೆರೆ ತುರುವೇಕೆರೆಯಿಂದ ೧೦ ಕಿ.ಮೀ. ದೂರದಲ್ಲಿದೆ. ಇದು ತುರುವೇಕೆರೆ ತಾಲೂಕಿನಲ್ಲಿರುವ ಒಂದು ದೊಡ್ಡ ಕೆರೆಯಾಗಿದೆ. ಇಂದಿಗೂ ಸುಸ್ಥಿತಿಯಲ್ಲಿದ್ದು, ಅವರ ಪ್ರಯೋಜನವನ್ನು ಜನರು ಪಡೆಯುತ್ತಿದ್ದಾರೆ. ಈ ಕೆರೆಯನ್ನು ಯಾರು ನಿರ್ಮಿಸಿದರೆಂದು ಸ್ಪಷ್ಟವಾಗಿ ತಿಳಿದುಬಂದಿಲ್ಲ. ಕ್ರಿ.ಶ. ೧೨೨೩ರಲ್ಲಿ ಹೊಯ್ಸಳ ವೀರನರಸಿಂಹನ ಆಳ್ವಿಕೆಯಲ್ಲಿ ಅವನ ಮಹಾಪ್ರಧಾನಿ ಸಂಧಿವಿಗ್ರಹ ಸೋವಣ್ಣ ದಂಡನಾಯಕರು ತುರುವೇಕೆರೆಯನ್ನು ೫ ವ್ರಿತ್ತಿಯ ಅಗ್ರಹಾರವನ್ನಾಗಿ ಮಾಡಿಕೊಂಡಿದ್ದರು.[೧೫] ಈ ವ್ರಿತ್ತಿಯ ಅಗ್ರಹಾರದಲ್ಲಿ ಮಲ್ಲಾಘಟ್ಟ ಕೆರೆಯ ಗದ್ದೆ ಬೆದ್ದಲು ಸೇರಿತ್ತು. ಇದರಿಂದ ಹೊಯ್ಸಳ ವೀರನರಸಿಂಹನ ಆಳ್ವಿಕೆಯ ಕಾಲದಲ್ಲಿ ಈ ಕೆರೆಯನ್ನು ನಿರ್ಮಿಸಿರಬೇಕೆಂದು ತಿಳಿದುಬರುತ್ತದೆ. ಹಿಂದೆ ಕೆರೆಗೆ ಮಳೆ ನೀರು ಸಂಗ್ರಹವಾಗುತ್ತಿತ್ತು. ನಂತರದ ಕಾಲದಲ್ಲಿ ಹೇಮಾವತಿ ನಾಲೆಯ ನೀರು ಹರಿದುಬರುತ್ತದೆ. ಸುಮಾರು ೫೬೭.೨೫ ಪ್ರಮಾಣದಷ್ಟು ನೀರಿನ ಸಂಗ್ರಹಣ ಸಾಮರ್ಥ್ಯವನ್ನು ಹೊಂದಿದೆ. ಈ ಕೆರೆಯ ಜಲಾನಯನ ಪ್ರದೇಶವು ೬೩೦ ಹೆಕ್ಟೇರ್‌ಗಳು ಮತ್ತು ಅಚ್ಚುಕಟ್ಟು ಪ್ರದೇಶವು ೨೮೫ ಹೆಕ್ಟೇರುಗಳು.

ಈ ಕೆರೆಯ ಏರಿಯು ಉತ್ತರ ದಕ್ಷಿಣಾಭಿಮುಖವಾಗಿದ್ದು, ಕೆರೆಯಿಂದ ಪೂರ್ವದಿಕ್ಕಿಗಿದೆ. ಏರಿಯ ಉದ್ದ ೭೫೦ ಮೀ. ಅಗಲ ೫ ಮೀ. ಇದೆ. ಇದರ ಮೇಲೆ ವಾಹನಗಳು

ಚಲಿಸಬಹುದು. ಏರಿಯ ಹೊರ ಭಾಗವು ಮಣ್ಣಿನಿಂದ ಕೂಡಿದ್ದರೆ ಒಳಭಾಗವು ದಪ್ಪ ದಪ್ಪ ಕಲ್ಲುಗಳಿಂದ ಕಟ್ಟಿರುವ ಕಲ್ಲಿನ ಕಟ್ಟಡದಂತೆ ರಚನೆಯಾಗಿದೆ. ಈ ಕೆರೆಯಲ್ಲಿ ಮೂರು ತೂಬುಗಳು, ಎರಡು ಕಾಲುವೆಗಳು ಮತ್ತು ಒಂದು ಕೋಡಿ ಇದೆ. ಕೆರೆಯ ಉತ್ತರ ದಿಕ್ಕಿನ ಏರಿಯಿಂದ ೧೨ ಅಡಿ ದೂರದಲ್ಲಿ ಒಂದು ತೂಬನ್ನು ನಿರ್ಮಿಸಲಾಗಿದೆ. ಮತ್ತೊಂದು ತೂಬನ್ನು ದಕ್ಷಿಣ ದಿಕ್ಕಿನ ಏರಿಯಿಂದ ೧೨ ಅಡಿ ದೂರದಲ್ಲಿ ಇರಿಸಲಾಗಿದೆ. ಕೆರೆಯ ಉತ್ತರ ದಿಕ್ಕಿಗೆ ಒಂದು ಕೋಡಿ ಇದ್ದು, ಹೆಚ್ಚುವರಿ ನೀರು ಅದರ ಮೂಲಕ ಹರಿಯ ಹೋಗುತ್ತದೆ. ಏರಿಗೆ ಹೊಂದಿಕೊಂಡಂತೆ ಎರಡು ಕಾಲುವೆಗಳಿವೆ. ಇವುಗಳ ಮೂಲಕ ಅಚ್ಚುಕಟ್ಟು ಪ್ರದೇಶಕ್ಕೆ ನೀರನ್ನು ಹಾಯಿಸುತ್ತಿದ್ದರು. ಕೆರೆಯ ಸುತ್ತಲಿನ ಅಚ್ಚುಕಟ್ಟು ಪ್ರದೇಶವು ಒಕ್ಕಲಿಗ, ಲಿಂಗಾಯತ, ಇತರೆ ಜನಾಂಗದವರಿಗೆ ಸೇರಿದ್ದು, ವಿವಿಧ ಬೆಳೆಗಳನ್ನು ಬೆಳೆಯಲು ಅನುಕೂಲಕರವಾಗಿದೆ. ಹಾಗೆಯೇ ಮೀನು ಸಾಕಣಿಕೆಗೆ ಉಪಯುಕ್ತವಾಗಿದೆ.

ಈ ಕೆರೆಯ ಉತ್ತರ ಮತ್ತು ದಕ್ಷಿಣ ದಿಕ್ಕಿನ ಎರಡು ಕಡೆಗಳಲ್ಲಿಯೂ ಗಂಗಾಧರೇಶ್ವರ ದೇವಾಲಯಗಳಿವೆ. ಕೆರೆಯ ಉತ್ತರಕ್ಕೆ ಇರುವ ದೇವಾಲಯವು ಕೆರೆ ನಿರ್ಮಾಣವಾದ ಕಾಲದಲ್ಲಿಯೇ ರಚನೆಯಾದಂತಿದೆ. ಈ ದೇವಾಲಯದ ಹತ್ತಿರ ನಿಂತು ನೋಡಿದರೆ, ಕೆರೆಯಿಂದ ಹೊರ ಭಾಗದಲ್ಲಿ ಎರಡು ದಿಬ್ಬಗಳು ಗೋಚರವಾಗುತ್ತವೆ. ಅವುಗಳನ್ನು ಅಣ್ಣ ತಮ್ಮಂದಿರ ಗುಡ್ಡೆ ಎನ್ನುವರು. ಇಬ್ಬರು ಸಹೋದರರು ಕೆರೆಯನ್ನು ಸುತ್ತಿ ಬರಲು ಹೋಗಿ, ಒಂದೇ ಸ್ಥಳದಲ್ಲಿ ಸಹೋದರರು ಮರಣ ಹೊಂದಿದ್ದು, ಆ ಸ್ಥಳದಲ್ಲಿ ಅವರನ್ನು ಸಮಾಧಿ ಮಾಡಲಾಗಿದೆ ಎಂಬ ನಂಬಿಕೆ ಸ್ಥಳೀಯರಲ್ಲಿ ಬೆಳೆದು ಬಂದಿದೆ. ಕೆರೆಯನ್ನು ಕುರಿತಂತೆ ಒಂದು ಐತಿಹ್ಯವಿದೆ. ಮಲ್ಲಾಘಟ್ಟ ಕೆರೆಯನ್ನು ೭ ಬಾರಿ ಕಟ್ಟಿದರು ಒಡೆದು ಹೋಗುತ್ತಿತ್ತು. ರಾಜನು ಅಲ್ಲಿ ದನ ಕಾಯುವ ಹುಡುಗರನ್ನು ಕೇಳಿದಾಗ ಅವರು ಕೆರೆಯ ಮಧ್ಯ ಏಳು ಗೆರೆಗಳನ್ನು ಹಾಕಿ, ಮಲ್ಲಾಘಟ್ಟ ಎಂದು ಈ ಕೆರೆಗೆ ಹೆಸರಿಡಬೇಕೆಂದು ಹೇಳಿದರು. ಅಂದಿನಿಂದ ಮಲ್ಲಾಘಟ್ಟದ ಕೆರೆ ಎಂದೇ ಪ್ರಸಿದ್ಧಿ ಪಡೆಯಿತು. ಇಂದಿಗೂ ಕೂಡ ಕೆರೆಗಳ ಮಧ್ಯ ಏಳು ಗೆರೆಗಳಿವೆ ಎಂಬ ನಂಬಿಕೆ ಇದೆ.

ಈ ಕೆರೆಯ ಉತ್ತರ ಭಾಗದಲ್ಲಿರುವ ಬಯಲು ಭೂಮಿಯಲ್ಲಿ ಹಿಂದೆ ವರ್ಷಕ್ಕೊಮ್ಮೆ ಜಾನುವಾರುಗಳ ಜಾತ್ರೆ ಜರುಗುತ್ತಿತ್ತು. ಜಾತ್ರೆಯಲ್ಲಿರುವ ಜಾನುವಾರುಗಳಿಗೆ ನೀರು ಕುಡಿಯಲು ಕೆರೆಯು ಸಹಾಯಕವಾಗಿತ್ತು. ಇಂದು ಜಾತ್ರೆಯು ಶಿವರಾತ್ರಿ ಆದ ಒಂಭತ್ತು ದಿನದ ನಂತರ ನಡೆಯುತ್ತದೆ. ಆದರೆ ಜಾತ್ರೆಯಲ್ಲಿ ಜಾನುವಾರುಗಳೇ ಕಂಡುಬರುವುದಿಲ್ಲ.

**ಸಂಪಿಗೆ ಕೆರೆ**

ಸಂಪಿಗೆಯು ತುರುವೇಕೆರೆ ತಾಲೂಕಿನಲ್ಲಿರುವ ಪುರಾಣ ಪ್ರಸಿದ್ಧವಾದ ಸ್ಥಳವಾಗಿದೆ.

ಇದು ಕಡಬದ ಪಶ್ಚಿಮಕ್ಕೆ ೪ ಮೈಲಿ ದೂರದಲ್ಲಿದೆ. ಈ ಸ್ಥಳವು ಶ್ರೀವೈಷ್ಣವರು ನೆಲೆಗೊಂಡ ಗ್ರಾಮವಾಗಿದೆ. ಪುರಾಣ ಕಾಲದಲ್ಲಿ ಚಂಪಕಾನಗರವೆಂದು, ಹಂಸಧ್ವಜ ಮಹಾರಾಜನ ಮಗ ಸುಧನ್ವನ ರಾಜಧಾನಿಯಾಗಿತ್ತೆಂದು ಪ್ರತೀತಿ ಇದೆ. ಈ ಗ್ರಾಮವು ಹಿಂದೆ ಗುಬ್ಬಿ ತಾಲೂಕಿನ ವ್ಯಾಪ್ತಿಯಲ್ಲಿತ್ತು. ನಂತರ ತುರುವೇಕೆರೆ ತಾಲೂಕಿಗೆ ಸೇರ್ಪಡೆಯಾಗಿದೆ. ಸಂಪಿಗೆಯು ಈ ತಾಲೂಕಿನಿಂದ ೧೫ ಕಿ.ಮೀ. ದೂರದಲ್ಲಿದೆ. ಕೆರೆಯು ಗ್ರಾಮದ ಪಶ್ಚಿಮಕ್ಕೆ ಇದೆ. ಕೆರೆಯ ಮುಂಭಾಗದಲ್ಲಿ ಒಂದು ಶಾಸನವು ದೂರಕಿದೆ. ಆ ಶಾಸನದಲ್ಲಿ ಕೆರೆಗೆ ಸಂಬಂಧಿಸಿದ ಯಾವುದೇ ವಿಚಾರಗಳು ತಿಳಿದುಬಂದಿಲ್ಲ. ಕ್ರಿ.ಶ. ೧೨೩೮ರ ಶಾಸನದ[೧೬] ಪ್ರಕಾರ ನಿಟ್ಟೂರಿನ ಪಟ್ಟಣಸ್ವಾಮಿಯಾಗಿದ್ದ ಒಬ್ಬ ವರ್ತಕ ಹಿರಿಯ ಕೆರೆಯನ್ನು ಕಟ್ಟಿಸಿ ಅದರ ಕೆಳಗಿನ ಭೂಮಿಯನ್ನು ಸಂಪಿಗೆ ಮಲ್ಲಿಕಾರ್ಜುನ ದೇವಾಲಯಕ್ಕೆ ದಾನ ನೀಡಿರುವುದು ತಿಳಿದುಬಂದಿದೆ. ಈ ಕೆರೆಯು ಹೊಯ್ಸಳ ೩ನೇ ನರಸಿಂಹನ ಆಡಳಿತ ಕಾಲಕ್ಕೆ ಸಂಬಂಧಿಸಿದ್ದಾಗಿದೆ. ಇಂದು ಕೆರೆಯ ಸುತ್ತಲಿನ ಅಚ್ಚುಕಟ್ಟು ಪ್ರದೇಶವು ಲಿಂಗಾಯಿತ, ಒಕ್ಕಲಿಗ ಮತ್ತು ತಿಗುಳ ಜನಾಂಗಕ್ಕೆ ಸೇರಿ ವಿವಿಧ ಬೆಳೆಗಳನ್ನು ಬೆಳೆಯುತ್ತಿರುವುದು ಕಂಡು ಬಂದಿದೆ.

ಕೆರೆಗೆ ನೀರು ವೀರಸಾಗರ ಕೆರೆಯಿಂದ ಹರಿದುಬರುತ್ತದೆ. ೫೮.೧೦ ಪ್ರಮಾಣದಷ್ಟು ನೀರನ್ನು ಸಂಗ್ರಹಿಸುವ ಸಾಮರ್ಥ್ಯವನ್ನು ಹೊಂದಿದೆ. ಈ ಕೆರೆಯ ಜಲಾನಯನ ಪ್ರದೇಶ ೨೫೨.೪೦ ಹೆಕ್ಟೇರ್ ಮತ್ತು ಅಚ್ಚುಕಟ್ಟು ಪ್ರದೇಶ ೯೪ ಹೆಕ್ಟೇರ್‌ಗಳು. ಏರಿಯು ಉತ್ತರ ಮತ್ತು ದಕ್ಷಿಣಾಭಿಮುಖವಾಗಿ ರಚನೆಯಾಗಿದ್ದು, ಕೆರೆಯಿಂದ ಪೂರ್ವದಕ್ಕಿಗೆ ಇದೆ. ಏರಿಯ ಉದ್ದ ೯೫೦ ಮೀ. ಅಗಲ ೫ ಮೀ. ಇದೆ. ಏರಿಗೆ ಹೊಂದಿಕೊಂಡಂತೆ ಒಂದು ಕಾಲುವೆ ಇದ್ದು, ಅಚ್ಚುಕಟ್ಟು ಪ್ರದೇಶಕ್ಕೆ ನೀರು ಹರಿದು ಹೋಗುತ್ತದೆ. ಇದರಿಂದ ತೆಂಗು, ಅಡಿಕೆ, ಇನ್ನಿತರ ಬೆಳೆಗಳನ್ನು ಬೆಳೆಯಲು ಉಪಯುಕ್ತವಾಗಿದೆ. ಇದು ಆರ್ಥಿಕವಾಗಿ ನರಳುತ್ತಿರುವ ಕುಟುಂಬಗಳು ತಮ್ಮ ಆರ್ಥಿಕ ವ್ಯವಸ್ಥೆಯನ್ನು ಉತ್ತಮಪಡಿಸಿಕೊಳ್ಳಲು ಸಹಾಯಕವಾಗಿದೆ. ಮೀನುಗಾರಿಕೆಗೆ ಬಳಕೆಯಾಗಿದ್ದು, ವಿಲೇವಾರಿಯಾಗುತ್ತಿದೆ. ಕೆರೆಯಲ್ಲಿ ಎರಡು ತೂಬುಗಳಿದ್ದು, ಒಂದು ತೂಬನ್ನು ದಕ್ಷಿಣ ದಿಕ್ಕಿನ ಏರಿಯಿಂದ ೧೦ ಅಡಿ ದೂರದಲ್ಲಿ ನಿರ್ಮಿಸಲಾಗಿದೆ. ಮತ್ತೊಂದು ತೂಬನ್ನು ಉತ್ತರ ದಿಕ್ಕಿನ ಕೋಡಿಗೆ ಅಳವಡಿಸಲಾಗಿದೆ. ಈ ಕೆರೆಯಲ್ಲಿ ಎರಡು ಕೋಡಿಗಳಿದ್ದು, ಕೆರೆಯ ಹೆಚ್ಚುವರಿ ನೀರು ಕೋಡಿಯ ಮೂಲಕ ಹೊರ ಹೋಗುತ್ತದೆ. ಉತ್ತರ ದಿಕ್ಕಿನ ಕೋಡಿ ಸಮೀಪ ಒಂದು ಶಾಸನ. ನಾಗರ ಕಲ್ಲುಗಳು, ಕೋಡಿ ಮಲ್ಲೇಶ್ವರ ಮತ್ತು ಚೆನ್ನಕೇಶವ ದೇವಸ್ಥಾನಗಳು ಇವೆ ಹಾಗೂ ಕೆರೆಗೆ ಹೊಂದಿಕೊಂಡಂತೆ ಒಂದು ಸಾರ್ವಜನಿಕ ಬಾವಿ ಇದೆ. ಸಂಪಿಗೆ ಗ್ರಾಮದಲ್ಲಿ ಹಿಂದೆ ೧,೬೪೦ರಷ್ಟು ಜನಸಂಖ್ಯೆ ಇದ್ದು, ೨೦೦೧ ರ ಜನಗಣತಿ ಪ್ರಕಾರ ೨,೨೮೦ರಷ್ಟು ಆಗಿದೆ. ಹೀಗೆ ಬೆಳೆಯುತ್ತಿರುವ ಜನಸಂಖ್ಯೆಗೆ ಅನುಗುಮವಾಗಿ ಆಯಕಟ್ಟು

ಪ್ರದೇಶವನ್ನು ಹೆಚ್ಚಿಸಲಾಯಿತು. ಇದಕ್ಕೆ ಪೂರಕವಾಗಿ ನೀರನ್ನು ಒದಗಿಸಲು ಇತ್ತೀಚೆಗೆ ಕೆರೆಗಳಲ್ಲಿ ಹೂಳೆತ್ತಿಸಿ ಆಳ ಮತ್ತು ಅಗಲವನ್ನು ಹೆಚ್ಚಿಸುವ ಕಾರ್ಯಾಚರಣೆ ನಡೆಯುತ್ತಿದೆ.

**ಜಡೆಯ ಕೆರೆ**

ತುರುವೇಕೆರೆ ತಾಲೂಕಿನಿಂದ ೧೪ ಕಿ.ಮೀ. ದೂರದಲ್ಲಿದೆ. ಇಂದು ಇದನ್ನು ಜಡೆ ಮಾಯಸಂದ್ರ ಎಂದು ಕರೆಯುತ್ತಾರೆ. ಮಾಯಸಂದ್ರದಿಂದ ೨ ಕಿ.ಮೀ. ದೂರದಲ್ಲಿದೆ. ಜಡೆಯ ಗ್ರಾಮದ ಪೂರ್ವಕ್ಕೆ ಕೆರೆ ಇದೆ. ಇದನ್ನು ಯಾರು ಕಟ್ಟಿಸಿದರು ಎಂಬುದರ ಬಗ್ಗೆ ಖಚಿತವಾದ ಮಾಹಿತಿ ದೊರೆಕಿಲ್ಲ. ಈ ಗ್ರಾಮದ ಈಶ್ವರ ದೇವಾಲಯದ ಹತ್ತಿರ ಕ್ರಿ.ಶ. ೧೨೫೯ರ ಶಾಸನದಲ್ಲಿ[೧೭] ವೀರಗಂಗ ಹೊಯ್ಸಳ ಸಾಮಂತ ಕೈದಾಳದ ಮಲ್ಲಿದೇವನ ಮಗ ಗಂಗದೇವ ಎಂದು ಇದ್ದು, ಕೆರೆಗೆ ಸುಂಬಂಧಿಸಿದಂತೆ. ಶಿವಯೋಗಿ ಸಿದ್ಧ ಚಕ್ರವರ್ತಿ ಹಿರಿಯ ಅಘಂಮ್ಯ ಸೋಮನಾಥ ದೇವರ ಪ್ರತಿಷ್ಠೆ ಮಾಡಿ ಆ ದೇವರ ಅಮೃತ ಪಡಿ ಶ್ರೀ ಕಾರ್ಯಕ್ಕೆ ಜಡೆಯದ ಹಿರಿಯ ಕೆರೆಯ ಕೆಳಗಿನ ಭೂಮಿ ಬಿಟ್ಟುದಾಗಿ ಅದನ್ನು ಅಘಂಮ್ಯ ದೇವರ ಮಗಳು ಕಾಳಲ ದೇವಶ್ರೀ ಶ್ರೀಕಾರ್ಯ ನಡೆಸಿ, ಆ ಭೂಮಿಯನ್ನು ಅನುಭವಿಸಿದಳು ಎಂಬುದಾಗಿ ಉಲ್ಲೇಖಿಸಲಾಗಿದೆ. ಕೆರೆಯು ಹೊಯ್ಸಳದ ಕಾಲದಲ್ಲಿ ನಿರ್ಮಾಣವಾಗಿರಬಹುದೆಂದು ತಿಳಿದುಬರುತ್ತದೆ.

ಏರಿಯು ಕೆರೆಯಿಂದ ಪೂರ್ವಕ್ಕೆ ಇದೆ. ಇದರ ಉದ್ದ ೧೫೦೦ ಮೀ. ಎತ್ತರ ೭ ಮೀ. ಮತ್ತು ಏರಿಯಾ ಮೇಲ್ಭಾಗದ ಹಗಲ ೩ ಮೀ. ಇದೆ. ಏರಿಗೆ ಹೊಂದಿಕೊಂಡಂತೆ ಎರಡು ತೂಬುಗಳಿದ್ದು, ಅವುಗಳಿಗೆ ಮರದ ತುಂಡನ್ನು ಅಳವಡಿಸಲಾಗಿದೆ. ತೂಬುಗಳಿಗೆ ಅನುಗುಣವಾಗಿ ಎರಡು ಕಾಲುವೆಗಳನ್ನು ಜೋಡಿಸಲಾಗಿದೆ. ಇದರಿಂದ ಆಯಕಟ್ಟು ಪ್ರದೇಶಕ್ಕೆ ನೀರು ಸಮರ್ಪಕವಾಗಿ ಹರಿದು ಬಂದು, ಭತ್ತ, ತೆಂಗು, ಇನ್ನಿತರ ಬೆಳೆಗಳನ್ನು ಬೆಳೆಯುತ್ತಾರೆ. ಕೆರೆಯು ೨೧.೮೬ರಷ್ಟು ನೀರಿನ ಸಂಗ್ರಹಣ ಸಾಮರ್ಥ್ಯವನ್ನು ಹೊಂದಿದೆ. ಜಲಾನಯನ ಪ್ರದೇಶ ೪೬.೦೦ ಹೆಕ್ಟೇರುಗಳು. ಜಡೆಯ ಕೆರೆಯು ಸುಮಾರು ೨೦೦ಕ್ಕೂ ಹೆಚ್ಚು ಎಕರೆಗಳಿಗೆ ನೀರುಣಿಸುವ ಸಾಮರ್ಥ್ಯವನ್ನು ಹೊಂದಿದೆ. ಈ ಕೆರೆಯು ಇಟ್ಟಿಗೆ ತಯಾರಿಕೆ, ಮೀನುಗಾರಿಕೆ ಮತ್ತು ಜಾನುವಾರುಗಳಿಗೆ ಹೆಚ್ಚು ಬಳಕೆಯಾಗುತ್ತಿದೆ. ಕೆರೆಯು ವಿಲೇವಾರಿಯಾಗುತ್ತಿದ್ದು ೨೦೦೯ರಲ್ಲಿ ಸುಮಾರು ೪,೦೯೮ರಷ್ಟಕ್ಕೆ ಆಗಿದೆ. ಇತ್ತೀಚೆಗೆ ಕೆರೆಯು ದುರಸ್ಥಿಯಾಗಿದ್ದು, ಆಳ ಮತ್ತು ಅಗಲವನ್ನು ಇನ್ನಷ್ಟು ವಿಸ್ತರಿಸಿಕೊಂಡಿದೆ. ಕೆರೆಯ ಪಕ್ಕದಲ್ಲಿ ಭೈರಾವೇಶ್ವರ ದೇವಸ್ಥಾನ ಇದೆ.

ಈ ಕೆರೆಗೆ ಸಂಬಂಧಿಸಿದಂತೆ ಒಂದು ಐತಿಪ್ಯ ಇದೆ. ಜಡೆಯ ಗ್ರಾಮದಲ್ಲಿ ಹಿಂದೆ ಪವಾಡ ಪುರುಷನಾದ ಜಡೆಸ್ವಾಮಿ ಎಂಬ ಋಷಿ ವಾಸವಾಗಿದ್ದರು. ಗ್ರಾಮದ ಕೆರೆ ಏರಿಯ

ಮೇಲೆ ಒಂದು ತಾಮ್ರಶಾಸನವಿದ್ದು, ಅದರಿಂದ ಊರಿನ ವ್ಯವಸಾಯಗಾರರಿಗೆ ತೊಂದರೆಯಾಗುತ್ತಿತ್ತು. ಇದನ್ನರಿತ ಋಷಿಯು ತನ್ನ ತಪೋಬಲದಿಂದ ಅದನ್ನು ಮೊಗಜಿ ಹಾಕಿದರು. ಇಂದು ಆ ತಾಮ್ರಶಾಸನ ಏರಿಯಲ್ಲಿ ಮುಚ್ಚಿ ಹೋಗಿದೆ ಎಂಬ ನಂಬಿಕೆ ಅಲ್ಲಿನ ಜನರಲ್ಲಿದೆ. ಈ ಋಷಿಯು ತಪಸ್ಸಿಗೆ ಕುಳಿತಾಗ ದೀಪದಲ್ಲಿ ಎಣ್ಣೆ ಮುಗಿದು ಹೋಯಿತು. ಶಿಷ್ಯನು ಅವರ ಧ್ಯಾನ ಮಾಡಿ ತೀರ್ಥವನ್ನು ದೀಪಕ್ಕೆ ಹಾಕಿದನು. ದೀಪವು ಪ್ರಜ್ವಲವಾಗಿ ಉರಿಯ ತೊಡಗಿತು. ಮರುದಿನ ಬೆಳಿಗ್ಗೆ ಋಷಿಯು ಸ್ನಾನ ಮಾಡಲು ಕೆರೆಗೆ ಹೋದರು. ಮರಳಿ ಬರುವಾಗ ಏಳು ಹೆಡೆ ಸರ್ಪವಾಗಿ ಬಂದು ಶಿವ ದೇವಸ್ಥಾನದ ಒಳಗೆ ಹೋದರು. ಅಂದಿನಿಂದ ಈ ಊರಿಗೆ ಜಡಿಯ ಅಥವಾ ಜಡೆಯಾ ಎಂಬ ಹೆಸರು ಬಂತು ಎಂಬ ಪ್ರತೀತಿ ಇದೆ. ಇಂದು ಈ ಗ್ರಾಮವು ಜಡೆ ಮಾಯಸಂದ್ರ ಎಂಬ ನಾಮಾಂಕಿತದಿಂದ ಪ್ರಚಲಿತವಾಗಿದೆ.

**ನಾಗಲಾಪುರ ಕೆರೆ**

ನಾಗಲಾಪುರ ಕೆರೆಯು ಹೊಯ್ಸಳ ಕಾಲದ ಕೆರೆಗಳಲ್ಲಿ ಒಂದಾಗಿದೆ. ಈ ಗ್ರಾಮಕ್ಕೆ ನಾಗಲಾಪುರಿ ಮತ್ತು ನಾಗಲಾಪುರ ಎಂಬ ಎರಡು ಹೆಸರುಗಳಿಂದ ಕರೆಯಲಾಗಿದೆ. ಇದು ತುರುವೇಕೆರೆಯಿಂದ ೧೦ ಕಿ.ಮೀ. ಮತ್ತು ಮಾಯಸಂದ್ರದಿಂದ ಸು.೮ ಕಿ.ಮೀ. ದೂರದಲ್ಲಿದೆ. ಗ್ರಾಮದ ಪೂರ್ವಕ್ಕೆ ಚಿಕ್ಕಕೆರೆ ಮತ್ತು ದಕ್ಷಿಣಕ್ಕೆ ದೊಡ್ಡಕೆರೆ ಎಂಬ ೨ ಕೆರೆಗಳಿವೆ. ಇಲ್ಲಿ ಕೆರೆಗಳ ಗಾತ್ರ, ವಿಸ್ತೀರ್ಣ, ಅಳತೆ ಮತ್ತು ಆಳವನ್ನು ಗಮನಿಸಿಕೊಂಡು ಹೀಗೆ ಕರೆಯುವುದು ಕಂಡುಬಂದಿದೆ. ಹೊಯ್ಸಳ ಕಾಲದಲ್ಲಿ ಅಗ್ರಹಾರವಾಗಿದ್ದ ನಾಗಲಾಪುರ ಗ್ರಾಮದಲ್ಲಿ ಚನ್ನಕೇಶವ ಮತ್ತು ಕೇದಾರೇಶ್ವರ ಎಂಬ ಎರಡು ದೇವಾಲಯಗಳಿವೆ. ಇವು ಹೊಯ್ಸಳ ಶೈಲಿಯ ಎಲ್ಲಾ ಗುಣಲಕ್ಷಣಗಳನ್ನು ಹೊಂದಿವೆ. ಅಗ್ರಹಾರ ನಿರ್ಮಾಣದ ಕಾಲ, ದೇವಾಲಯಗಳನ್ನು ಕಟ್ಟಿಸಿದವರ ಹೆಸರು ತಿಳಿದಿಲ್ಲ. ದೇವಾಲಯಗಳ ನಿರ್ಮಾಣದ ರೀತಿ ಮತ್ತು ಅಲ್ಲಿನ ಕೆಲವು ಮೂರ್ತಿಗಳಲ್ಲಿ ಕಂಡುಬಂದ ಶಿಲ್ಪಿಯ ಹೆಸರಿನಿಂದ ಅಗ್ರಹಾರ ಮತ್ತು ದೇವಾಲಯಗಳ ನಿರ್ಮಾಣ ಕಾಲವನ್ನು ೧೩ನೇ ಶತಮಾನವೆಂದು ಗುರುತಿಸಲಾಗಿದೆ.[೧೮] ಕೇದಾರೇಶ್ವರ ದೇವಾಲಯದ ಮುಂಭಾಗದಲ್ಲಿ ಚಿಕ್ಕಕೆರೆ ಇದೆ. ಈ ಕೆರೆಯು ೨೧೦ರಷ್ಟು (ಟಿ.ಎಂ.ಸಿ) ನೀರನ್ನು ಸಂಗ್ರಹಿಸುವ ಸಾಮರ್ಥ್ಯವನ್ನು ಹೊಂದಿದೆ. ಜಲಾಯನ ಪ್ರದೇಶ ೮ ಹೆಕ್ಟೇರ್ ಮತ್ತು ಅಚ್ಚುಕಟ್ಟು ಪ್ರದೇಶ ೭೫೦ ಹೆಕ್ಟೇರ್‌ಗಳು. ಕೆರೆಯಿಂದ ಪೂರ್ವಕ್ಕೆ ಏರಿ ಇದೆ. ಇದರ ಉದ್ದ ೩೦೦ ಮೀ. ಅಗಲ ೨ ಮೀ. ಇದೆ. ಏರಿಗೆ ಮರದ ತುಂಡಿನಿಂದ ರಚನೆಯಾದ ಒಂದು ತೂಬನ್ನು ನಿರ್ಮಿಸಲಾಗಿದೆ. ತೂಬಿಗೆ ಅನುಗುಣವಾಗಿ ಒಂದು ಕಾಲುವೆ ಇದೆ. ಅವುಗಳಿಂದ ನೀರನ್ನು ಅಚ್ಚುಕಟ್ಟು ಪ್ರದೇಶಕ್ಕೆ ಹಾಯಿಸಿ ಅಧಿಕವಾದ ಕೃಷಿಯನ್ನು ಪಡೆಯುತ್ತಿದ್ದರು. ಅಲ್ಲಿ ಮುಖ್ಯವಾಗಿ ತೆಂಗು, ಅಡಿಗೆ ಇದ್ದವು. ಕೆರೆಯಿಂದ ದಕ್ಷಿಣ ಭಾಗಕ್ಕೆ ಒಂದು ಕೋಡಿ ಇದೆ. ಕೆರೆಯ ಹೆಚ್ಚುವರಿ ನೀರು

ಇದರಿಂದ ಹೊರಹೋಗುತ್ತದೆ. ಚಿಕ್ಕಕೆರೆ ಮತ್ತು ದೊಡ್ಡಕೆರೆ ಮಧ್ಯ ಭಾಗದಲ್ಲಿ ಹೊಯ್ಸಳ ಕಾಲದ ಒಂದು ಶಾಸನಕಲ್ಲು ಊರಿನ ಮುಂದೆ ಬಿದ್ದಿದೆ. ಅದರಲ್ಲಿ ಈ ಕೆರೆಯನ್ನು ಯಾರು ಕಟ್ಟಿಸಿದರೆಂದು ವಿವರಗಳು ದೊರಕಿಲ್ಲ. ಇದರಿಂದ ಈ ಕೆರೆಗಳು ಹೊಯ್ಸಳ ಕಾಲದಲ್ಲಿ ನಿರ್ಮಾಣವಾಗಿರಬೇಕು ಎಂಬುದಾಗಿ ತಿಳಿಯಬಹುದಾಗಿದೆ.

ಈ ಗ್ರಾಮದ ಉತ್ತರ ದಿಕ್ಕಿನ ಕೆರೆಯನ್ನು ಕಡಸೂರು ಕೆರೆ ಎಂದು ಕರೆಯುತ್ತಾರೆ. ಈ ಕೆರೆಯ ಪಕ್ಕದಲ್ಲಿ ಕಡಸೂರು ಗ್ರಾಮವು ಇದ್ದು, ಇಲ್ಲಿನ ಜನರು ಇಂದು ಕೆರೆಯ ಉಪಯೋಗವನ್ನು ಪಡೆಯುತ್ತಿರುವುದರಿಂದ ಕೆರೆಯನ್ನು ಈ ರೀತಿಯಾಗಿ ಕರೆದಿದ್ದಾರೆ. ಈ ಕೆರೆಯ ಏರಿ ಹತ್ತಿರ ಒಂದು ವೀರಗಲ್ಲು ಇದ್ದು, ಯುದ್ದಕ್ಕೆ ಸಿದ್ಧನಾದ ವೀರನಂತೆ ಕಂಡು ಬರುತ್ತದೆ. ಕೆರೆಯು ೪೨.೮೫ರಷ್ಟು ನೀರಿನ ಸಂಗ್ರಹಣ ಸಾಮರ್ಥ್ಯವನ್ನು, ೭೯ ಹೆಕ್ಟೇರ್ ಜಲಾನಯನ ಪ್ರದೇಶವನ್ನು ಮತ್ತು ೧೧೦ ಹೆಕ್ಟೇರ್ ಅಚ್ಚುಕಟ್ಟು ಪ್ರದೇಶವನ್ನು ಹೊಂದಿದೆ. ಕೆರೆಯ ಏರಿಯು ಉತ್ತರ ದಕ್ಷಿಣಾಭಿಮುಖವಾಗಿದ್ದು ಕೆರೆಯಿಂದ ಉತ್ತರ ದಿಕ್ಕಿಗೆ ಇದೆ. ಏರಿಯ ಉದ್ದ ೭೫೦ ಮೀ. ಮತ್ತು ಅಗಲ ೩ ಮೀ. ಇದೆ. ಪ್ರಸ್ತುತ ಕಾಲದಲ್ಲಿ ಏರಿಯು ಅಲ್ಲಲ್ಲಿ ಕುಸಿಯುವ ಸ್ಥಿತಿಯಲ್ಲಿದೆ. ಈ ಕೆರೆಯಲ್ಲಿ ಹೂಳೆತ್ತುವ ಕಾರ್ಯ ಕೈಗೊಂಡು, ಜೀರ್ಣೋದ್ದಾರ ಮಾಡಿದರೆ, ಕೆರೆಯು ತನ್ನ ಆಳ ಮತ್ತು ಅಗಲವನ್ನು ಹೆಚ್ಚಿಸಿಕೊಳ್ಳುತ್ತದೆ. ಇದರಿಂದ ಹೆಚ್ಚುತ್ತಿರುವ ಅಚ್ಚುಕಟ್ಟು ಪ್ರದೇಶಕ್ಕೆ ನೀರನ್ನು ಪೂರೈಸಲು ಸಹಾಯಕವಾಗುತ್ತದೆ ಎನ್ನಬಹುದು. ಕೆರೆಯಲ್ಲಿ ಎರಡು ತೂಬುಗಳಿದ್ದು, ಒಂದು ತೂಬನ್ನು ದಕ್ಷಿಣ ದಿಕ್ಕಿನ ಏರಿಗೆ ಮತ್ತೊಂದು ತೂಬನ್ನು ಉತ್ತರ ದಿಕ್ಕಿನ ಏರಿಗೆ ನಿರ್ಮಿಸಲಾಗಿದೆ. ಏರಿಗೆ ಹೊಂದಿಕೊಂಡಂತೆ ಎರಡು ಕಾಲುವೆಗಳಿವೆ. ಇವುಗಳಿಂದ ಆಯಕಟ್ಟು ಪ್ರದೇಶಕ್ಕೆ ನೀರನ್ನು ಹಾಯಿಸಿ ಅತ್ಯಧಿಕ ಕೃಷಿಯನ್ನು ಪಡೆಯುತ್ತಾರೆ. ಅದರಲ್ಲಿ ಮುಖ್ಯವಾಗಿ ಭತ್ತದ ಗದ್ದೆ, ತೆಂಗು, ಇನ್ನಿತರ ವಾಣಿಜ್ಯ ಬೆಳೆಗಳು, ಏಕದಳ ಮತ್ತು ದ್ವಿದಳ ಧಾನ್ಯಗಳನ್ನು ಬೆಳೆಯಲು ಅನುಕೂಲಕರವಾಗಿದೆ. ಮೀನುಗಾರಿಕೆಗೆ ಉಪಯುಕ್ತವಾಗಿದ್ದು, ವಾರ್ಷಿಕವಾಗಿ ವಿಲೇವಾರಿಯಾಗುತ್ತಿದೆ. ಕೆರೆಯ ಉತ್ತರ ಮತ್ತು ದಕ್ಷಿಣ ದಿಕ್ಕಿಗೆ ಎರಡು ಕೋಡಿಗಳಿದ್ದು, ಉತ್ತರ ದಿಕ್ಕಿನ ಕೋಡಿ ಹತ್ತಿರ ಶಿವಲಿಂಗ, ಬಸವಣ್ಣ ಮತ್ತು ಗಣಪತಿ ವಿಗ್ರಹವಿದೆ. ಈ ಕೋಡಿಯು ಒಡೆದು ಹೋಗಿದ್ದರಿಂದ ಅದನ್ನು ಜೀರ್ಣೋದ್ಧಾರ ಮಾಡಿ ಪೂರ್ವಕ್ಕೆ ಮತ್ತೊಂದು ಕೋಡಿಯನ್ನು ನಿರ್ಮಿಸಿದ್ದಾರೆ.. ದಕ್ಷಿಣ ದಿಕ್ಕಿನ ಕೋಡಿ ಹತ್ತಿರದಲ್ಲಿಯೂ ಒಂದು ಬಸವಣ್ಣ ವಿಗ್ರಹ ಇದೆ.

**ತಂಡಗ ಕೆರೆ**

ತಂಡಗ ಕೆರೆಯು ತುರುವೇಕೆರೆಯಿಂದ ತಿಪಟೂರಿಗೆ ಹೋಗುವ ಮಾರ್ಗದಲ್ಲಿ ಸುಮಾರು ೬ ಕಿ.ಮೀ. ದೂರದಲ್ಲಿದೆ. ಈ ಗ್ರಾಮವನ್ನು 'ಹಳೇ ತಂಡಗ' ಎಂಬುದಾಗಿ ಕರೆಯುತ್ತಿದ್ದರು.

ಹೊಯ್ಸಳರ ಕಾಲದ ಶಾಸನಗಳಲ್ಲಿ ಈ ಗ್ರಾಮಕ್ಕೆ 'ಶಂಕರನಾರಾಯಣಪುರ' ಮತ್ತು 'ತಂಡಗ' ಎಂಬ ಎರಡು ಹೆಸರುಗಳನ್ನು ಉಲ್ಲೇಖಿಸಲಾಗಿದೆ. ಹಳೆ ತಂಡಗ ಗ್ರಾಮವು ಶಕ ಪುರುಷನಾದ ಶಾಲಿವಾಹನದ ಜನ್ಮಸ್ಥಳವೆಂದು ತಿಳಿದುಬಂದಿದೆ. ಸುಮಾರು ೧೪ನೇ ಶತಮಾನದ ಹೊಯ್ಸಳ ಶೈಲಿಯ ಚನ್ನಕೇಶವ ದೇವಾಲಯದ ಹಿಂಭಾಗಕ್ಕೆ ಕೆರೆಯು ಇದೆ. ಇಲ್ಲಿನ ದೇವಾಲಯದ ಹತ್ತಿರ ಒಂದು ಶಾಸನಕಲ್ಲು ದೊರೆತಿದ್ದು, ಅದು ಅಸ್ಪಷ್ಟವಾಗಿದೆ. ಗ್ರಾಮದ ಊರ ಒಳಗಿನ ಈಶ್ವರ ದೇವಸ್ಥಾನದ ಸಮೀಪ ಒಂದು ಶಾಸನ ಮತ್ತು ವೀರಗಲ್ಲುಗಳು ಇವೆ. ಈ ಶಾಸನದಲ್ಲಿ ಭೀಮಣ್ಣನು ಕೆರೆಯನ್ನು ಕಟ್ಟಿಸಿದನೆಂದು ತಿಳಿದುಬರುತ್ತದೆ. ಇಲ್ಲಿನ ಕ್ರಿ.ಶ. ೧೧೦೨ರ ಹೊಯ್ಸಳ ಕಾಲದ ಶಾಸನವು[೧೯] ಮೂಲ ದೇವರಿಗೆ ನಿತ್ಯ ನೈವೇದ್ಯಗೋಸ್ಕರ ಭೀಮಣ್ಣನು ಕಾರು ಕೆರೆಯ ಕೆಳಗಿನ ಭೂಮಿಯನ್ನು ದತ್ತಿ ಬಿಟ್ಟ ವಿವರವಿದೆ. ಇಂದು ಕೆರೆಯ ಸುತ್ತಲಿನ ಆಯಕಟ್ಟು ಪ್ರದೇಶವು ಲಿಂಗಾಯಿತ, ಬ್ರಾಹ್ಮಣರು, ಜೇನಿಗರು, ಒಕ್ಕಲಿಗರು ಮತ್ತು ಆಚಾರ್ಯರಿಗೆ ಸೇರಿದೆ. ಇವರು ಕೆರೆಯ ನೀರನ್ನು ಬಳಸಿಕೊಂಡು ವಿವಿಧ ರೀತಿಯ ಬೆಳೆಗಳನ್ನು ಬೆಳೆಯುತ್ತಿರುವುದು ಕಂಡುಬಂದಿದೆ.

ಕೆರೆಯು ಮೊದಲು ಮಳೆಯ ನೀರಿನಿಂದ ಕೂಡಿದ್ದು, ಇತ್ತೀಚೆಗೆ ಹೇಮಾವತಿ ನಾಲೆಯ ನೀರು ಹರಿದು ಬರುತ್ತದೆ. ೩೫.೨೫ರಷ್ಟು ಕೆರೆಯು ನೀರಿನ ಸಂಗ್ರಹಣ ಸಾಮರ್ಥ್ಯವನ್ನು ಹೊಂದಿದೆ. ೮೦.೫ ಹೆಕ್ಟೇರ್ ಜಲವಿಸ್ತೀರ್ಣವಿದ್ದು, ೮೬ ಹೆಕ್ಟೇರ್‌ಗಳಷ್ಟು ಅಚ್ಚುಕಟ್ಟು ಪ್ರದೇಶಗಳಿಗೆ ನೀರನ್ನು ಒದಗಿಸುತ್ತದೆ. ಕೆರೆಯ ಏರಿಯೂ ಪೂರ್ವ ಮತ್ತು ಪಶ್ಚಿಮಾಭಿಮುಖವಾಗಿದ್ದು, ಕೆರೆಯಿಂದ ಉತ್ತರ ದಿಕ್ಕಿಗೆ ಇದೆ. ಏರಿಯ ಉದ್ದ ೧ ಕಿ.ಮೀ. ಇದ್ದು, ಎತ್ತರ ೮ ಮೀ. ಮತ್ತು ಏರಿಯ ಮೇಲ್ಭಾಗದ ಅಗಲ ೪ ಮೀ. ಇದೆ. ಕೆರೆಯ ಏರಿಗೆ ಹೊಂದಿ ಕೊಂಡಂತೆ ಮರದ ತುಂಡುಗಳ ಎರಡು ತೂಬುಗಳಿವೆ. ಒಂದು ತೂಬನ್ನು ಪಶ್ಚಿಮ ದಿಕ್ಕಿನ ಕೋಡಿ ಹತ್ತಿರ ಏರಿಗೆ ಅಳವಡಿಸಲಾಗಿದೆ. ಮತ್ತೊಂದು ತೂಬು ಏರಿಯ ಮಧ್ಯದಲ್ಲಿ ಇದೆ. ತೂಬುಗಳಿಗೆ ಅನುಗುಣವಾಗಿ ಎರಡು ಕಾಲುವೆಗಳು ಏರಿಯಿಂದ ಹೊರಬಂದಿವೆ. ಇವುಗಳ ಮೂಲಕ ಆಯಕಟ್ಟು ಪ್ರದೇಶಕ್ಕೆ ನೀರು ಹರಿದು ಬಂದು, ಭತ್ತದ ಗದ್ದೆ, ತೆಂಗು, ಅಡಿಕೆ ಇನ್ನೂ ಮುಂತಾದವುಗಳನ್ನು ಸರ್ವಕಾಲದಲ್ಲಿಯೂ ಬೆಳೆಯುತ್ತಾರೆ. ಕೆರೆಯು ಎರಡು ಕೋಡಿಗಳನ್ನು ಹೊಂದಿದೆ. ಇವುಗಳ ಮೂಲಕ ಕೆರೆಯ ಹೆಚ್ಚುವರಿ ನೀರು ವೆಚ್ಚವಾಗದಂತೆ ಕಣತೂರು ಕೆರೆಯನ್ನು ಸೇರುತ್ತದೆ. ಈ ಗ್ರಾಮದ ಕೆರೆಯ ನೀರನ್ನು ಮೊದಲು ಕುಡಿಯಲು ಬಳಸುತ್ತಿದ್ದರು. ಇತ್ತೀಚೆಗೆ ಬೋರ್‌ವೆಲ್‌ಗಳ ನೀರನ್ನು ಉಪಯೋಗಿಸುತ್ತಿದ್ದಾರೆ. ಕೆರೆಯ ನೀರು ಹೆಚ್ಚಾಗಿ ಮೀನುಗಳ ಸಾಕಾಣಿಕೆಗೆ, ಜಾನುವಾರುಗಳಿಗೆ ಮತ್ತು ಬಟ್ಟೆ ತೊಳೆಯಲು ಬಳಕೆಯಾಗುತ್ತಿದೆ. ವಾರ್ಷಿಕವಾಗಿ ಈ ಕೆರೆಯ ವಿಲೇವಾರಿಯಾಗುತ್ತಿದ್ದು, ೨೦೦೯ರಲ್ಲಿ ೪,೨೦೦ರಷ್ಟುಕ್ಕೆ ವಿಲೇವಾರಿ ಆಗಿದೆ.

ಈ ಕೆರೆಯಲ್ಲಿ ಹೂಳೆತ್ತುವ ಕಾರ್ಯ ಮಾಡದೆ ಕೆರೆಯು ತನ್ನ ಆಳ ಮತ್ತು ಅಗಲವಾದ ವಿಸ್ತೀರ್ಣವನ್ನು ಕಳೆದುಕೊಳ್ಳುತ್ತದೆ. ಇದು ನೀರಾವರಿ ಇಲಾಖೆಯಿಂದ ರಕ್ಷಣೆಯನ್ನು ಪಡೆದಿದ್ದರು. ಕೆರೆಯ ತುಂಬ ಕಸ, ಕಡ್ಡಿ ಮತ್ತು ಗಿಡಗಳು ಬೆಳೆದಿವೆ. ಕೆರೆಯನ್ನು ಜೀರ್ಣೋದ್ಧಾರ ಮಾಡಿದರೆ ಬೆಳೆಯುತ್ತಿರುವ ಜನಸಂಖ್ಯೆಗೆ ಅನುಸಾರವಾಗಿ ಹೆಚ್ಚುತ್ತಿರುವ ಅಚ್ಚುಕಟ್ಟು ಪ್ರದೇಶಕ್ಕೆ ಸಮರ್ಪಕವಾದ ನೀರನ್ನು ಒದಗಿಸಲು ಸಹಾಯವಾಗುತ್ತಿದೆ. ಅಲ್ಲದೆ ಕೆರೆಯ ಪಕ್ಕದಲ್ಲಿನ ಹೊಯ್ಸಳ ಶೈಲಿ ಹೊಂದಿದ ಚನ್ನಕೇಶವ ದೇವಸ್ಥಾನವನ್ನು ನೋಡಲು ಬರುವ ಪ್ರವಾಸಿಗರಿಗೆ ಇಲ್ಲಿನ ಕೆರೆಯು ಆಕರ್ಷಕ ತಾಣವಾಗಿ ಕಂಡುಬರುತ್ತದೆ ಎನ್ನಬಹುದು.

**ಕೊಂಡಜ್ಜಿ ಕೆರೆ**

ಕೊಂಡಜ್ಜಿ ಕೆರೆಯು ನಗರದ ಉತ್ತರ ದಿಕ್ಕಿಗೆ, ೧೮ ಕಿ.ಮೀ. ದೂರದಲ್ಲಿದೆ. ಹೊಯ್ಸಳ ಕಾಲದ ಶಾಸನಗಳಲ್ಲಿ ಕೊಂಡಂಜಿ ಮತ್ತು ಕೊಂಡಜ್ಜಿ ಎಂಬ ಎರಡೂ ಹೆಸರುಗಳನ್ನು ಬಳಸಲಾಗಿದೆ. ಕೆರೆಯು ಗ್ರಾಮದ ಉತ್ತರ ದಿಕ್ಕಿಗೆ ಇದೆ. ಈ ಕೆರೆಯು ಹೊಯ್ಸಳ ಅರಸನ ಸೋಮೇಶ್ವರನ ಕಾಲದಲ್ಲಿ ನಿರ್ಮಾಣವಾಗಿರಬೇಕು ಎಂಬುದಾಗಿ ತಿಳಿದುಬರುತ್ತದೆ. ಗ್ರಾಮದ ಸೋಮೇಶ್ವರ ದೇವಾಲಯದ ಒಳಗೆ ಕ್ರಿ.ಶ. ೧೨೫೨ರ ಸೋಮೇಶ್ವರನ ಕಾಲದ ಶಾಸನ[೨೦] ವಿದೆ. ಅದರಲ್ಲಿ ಹೊಯ್ಸಳ ಸಂಧಿವಿಗ್ರಹಿ ಬೊಮ್ಮಣ ದಂಡನಾಯಕನು ಕೊಂಡಜ್ಜಿ ಗ್ರಾಮವನ್ನು 'ಶಿವಪುರ' ಎಂಬ ಹೆಸರಿನ ಅಗ್ರಹಾರವನ್ನಾಗಿ ಮಾಡಿ ಶಿವಯೋಗಿ ಸಿದ್ಧ ಚಕ್ರವರ್ತಿ. ಅಘಮೇಶ್ವರ ದೇವರಿಗೆ ಮತ್ತು ಬ್ರಹ್ಮೇಶ್ವರ ಸೊಯಿದೇವ, ತ್ರಿಕೂಟ ಸೋಮನಾಥ ದೇವರುಗಳ ಪೂಜೆಗೋಸ್ಕರ ದಾನ ನೀಡಿದ ವಿವರ ಇದೆ. ಪ್ರಸ್ತುತ ಸೋಮನಾಥ ದೇವಸ್ಥಾನದ ಪೂಜೆಯನ್ನು ಬ್ರಾಹ್ಮಣ ವರ್ಗದವರು ನಡೆಸುತ್ತಿದ್ದು, ಆ ದೇವಾಲಯಕ್ಕೆ ಸಂಬಂಧಿಸಿದ ಆಯಕಟ್ಟು ಪ್ರದೇಶವನ್ನು ಆ ವರ್ಗದವರೇ ನೋಡಿಕೊಳ್ಳುತ್ತಿದ್ದಾರೆ.

ಈ ಕೆರೆಗೆ ಸಾರಿಗೆಹಳ್ಳಿ ಕೆರೆಯಿಂದ ನೀರು ಹರಿದು ಬರುತ್ತದೆ. ಏರಿಯು ಕೆರೆಯಿಂದ ಪೂರ್ವದಿಕ್ಕಿಗೆ ಇದೆ. ಸುಮಾರು ೧ ಕಿ.ಮೀ. ಉದ್ದ ಇದ್ದು, ಮೇಲ್ಭಾಗದ ಅಗಲ ೩ ಮೀ. ಇದೆ. ಏರಿಯ ಹಿಂಭಾಗದ ಗದ್ದೆ ಬೆದ್ದಲ ಮಧ್ಯದಲ್ಲಿ ಒಂದು ಹಾಳು ಮಂಟಪ ಇದೆ. ಅದರ ಲಲಾಟ ಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪ ಕಂಡುಬಂದಿದೆ. ಒಳಗಡೆ ಶಿವಲಿಂಗವಿದ್ದು, ಅದರ ಮುಂಭಾಗದಲ್ಲಿ ಬಸವಣ್ಣ ವಿಗ್ರಹ ಮತ್ತು ಸಪ್ತಮಾತೃತೆಯರ ಶಿಲ್ಪಗಳಿವೆ. ಹೊರಭಾಗದಲ್ಲಿ ಹೊಯ್ಸಳ ಕಾಲದ ಅಸ್ಪಷ್ಟವಾದ ಒಂದು ಶಾಸನಕಲ್ಲು ಇದೆ. ಈ ಶಾಸನದ ಬಗ್ಗೆ ಯಾವುದೇ ಮಾಹಿತಿಗಳು ದೊರೆತಿಲ್ಲ.

ಕೆರೆಯು ೩೬.೩೨ರಷ್ಟು ನೀರಿನ ಸಂಗ್ರಹಣ ಸಾಮರ್ಥ್ಯವನ್ನು ಹೊಂದಿದೆ. ೨೬.೨೦ ಹೆಕ್ಟೇರ್‌ಗಳಷ್ಟು ಜಲ ವಿಸ್ತೀರ್ಣ ಇದ್ದು, ೮೫.೭೫ ಹೆಕ್ಟೇರ್ ಅಚ್ಚುಕಟ್ಟು ಪ್ರದೇಶಗಳಿಗೆ ನೀರನ್ನು

ಪೂರೈಸುತ್ತಿವೆ. ಈ ಕೆರೆಯ ಮೇಲ್ಭಾಗದಲ್ಲಿ ಹಲವಾರು ಕೆರೆ ಕುಂಟೆಗಳಿದ್ದು, ಅವುಗಳಲ್ಲಿ ಹೆಚ್ಚುವರಿಯಾದ ನೀರು ಈ ಕೆರೆಯಲ್ಲಿ ಸಂಗ್ರಹವಾಗುತ್ತದೆ. ಕೆರೆಯ ಏರಿಯ ಎರಡು ಕೊನೆಯಂಚಿನಲ್ಲಿ ಎರಡು ಕೋಡಿಗಳಿವೆ. ಇವುಗಳಿಂದ ಕೆರೆಯ ಹೆಚ್ಚುವರಿ ನೀರು ಹೊರ ಹೋಗುತ್ತದೆ. ಕೆರೆಯಲ್ಲಿ ಎರಡು ತೂಬುಗಳಿದ್ದು ಒಂದು ಕಾರ್ಯ ನಿರತವಾಗಿದ್ದು, ಮತ್ತೊಂದು ತೂಬು ಮುಚ್ಚಿದೆ. ತೂಬಿಗೆ ಅನುಗುಣವಾಗಿ ಏರಿಯಿಂದ ಒಂದು ಕಾಲುವೆ ಹೊರಬಂದಿದೆ. ಇದರಿಂದ ಆಯಕಟ್ಟು ಪ್ರದೇಶಕ್ಕೆ ನೀರನ್ನು ಹಾಯಿಸಿ ಭತ್ತದ ಗದ್ದೆ, ತೆಂಗು, ಬಾಳೆ, ಮುಂತಾದ ಬೆಳೆಗಳನ್ನು ಸರ್ವಕಾಲದಲ್ಲಿಯೂ ಬೆಳೆಯಲು ಅನುಕೂಲಕರವಾಗಿದೆ. ಕೆರೆಯ ನೀರು ಇಂದು ಬಟ್ಟೆ ತೊಳೆಯಲು ಜಾನುವಾರುಗಳಿಗೆ ಮತ್ತು ಮೀನುಗಾರಿಕೆಗೆ ಹೆಚ್ಚು ಬಳಕೆಯಾಗುತ್ತಿದೆ. ಕೆರೆಯಲ್ಲಿ ಇರುವ ಜಲಚರ ಪ್ರಾಣಿಗಳಿಗೆ ಆಸರೆಯಾಗಿದೆ. ಈ ಕೆರೆಯು ವಾರ್ಷಿಕವಾಗಿ ವಿಲೇವಾರಿಯಾಗುತ್ತಿದ್ದು, ನೀರಾವರಿ ಇಲಾಖೆಯಿಂದ ರಕ್ಷಣೆಯನ್ನು ಪಡೆದಿದೆ.

**ಸಾರಿಗೆಹಳ್ಳಿಕೆರೆ**



ದಂಡಿಶಿವರ ಹೋಬಳಿಗೆ ಸೇರಿದ ಸಾರಿಗೆಹಳ್ಳಿ ಕೆರೆಯು ತುರುವೇಕೆರೆಯಿಂದ ೧೨ ಕಿ.ಮೀ. ದೂರದಲ್ಲಿದೆ. ಕೆರೆಯು ಮಾಚೇನಹಳ್ಳಿ ಗ್ರಾಮದ ಪೂರ್ವಕ್ಕೆ ಮತ್ತು ಸಾರಿಗೆಹಳ್ಳಿಯ ಉತ್ತರ ದಿಕ್ಕಿಗೆ ಇದೆ. ಈ ಕೆರೆಯನ್ನು ಯಾರು ಕಟ್ಟಿಸಿದರು ಎಂಬುದಕ್ಕೆ ಯಾವುದೇ ಮಾಹಿತಿಗಳು ದೊರಕಿಲ್ಲ. ಸಾರಿಗೆಹಳ್ಳಿಕೆರೆಯು ಪೂರ್ವ-ಪಶ್ಚಿಮಾಭಿಮುಖವಾಗಿ ಉದ್ದವಾಗಿ ಇದ್ದು, ಉತ್ತರ ಮತ್ತು ದಕ್ಷಿಣ ದಿಕ್ಕಿನ ವಿಸ್ತೀರ್ಣ ಕಡಿಮೆ ಇದ್ದುದರಿಂದ ಕೆರೆಗೆ ಈ ಹೆಸರು ಬಂದಿದೆ ಎನ್ನಬಹುದು. ಕೆರೆಯ ಏರಿಯು ಪೂರ್ವ ಮತ್ತು ಪಶ್ಚಿಮಕ್ಕೆ ೯೦೦ ಮೀ. ಉದ್ದವಿದ್ದು, ಮೇಲ್ಭಾಗದ ಅಗಲ ೪ ಮೀ. ಮತ್ತು ಬಾಗಿದ ಎತ್ತರ ೧೦ ಅಥವಾ ೧೨ ಮೀ. ಇದೆ. ಕೆರೆಯಿಂದ ದಕ್ಷಿಣ ದಿಕ್ಕಿಗೆ ಏರಿ ಇದೆ. ಕೆರೆಯಲ್ಲಿ ಎರಡು ತೂಬುಗಳಿದ್ದು, ಎರಡು ಕೂಡ ಮರದ ತುಂಡುಗಳಿಂದ ಕೂಡಿವೆ. ಇದರಲ್ಲಿ ಒಂದು ತೂಬು ಪೂರ್ವದಿಕ್ಕಿನ ಏರಿಯಿಂದ ೬ ಅಡಿ ದೂರದಲ್ಲಿ ಇದ್ದರೆ ಮತ್ತೊಂದು ತೂಬನ್ನು ಪಶ್ಚಿಮ ದಿಕ್ಕಿನ ಏರಿಯಿಂದ ೮ ಅಡಿ ದೂರದಲ್ಲಿ ನಿರ್ಮಿಸಲಾಗಿದೆ. ಏರಿಗೆ ಹೊಂದಿಕೊಂಡಂತೆ ಎರಡು ಕಾಲುವೆಗಳಿವೆ.

ಪೂರ್ವ ದಿಕ್ಕಿನ ಕಾಲುವೆಯ ಮೇಲೆ ಒಂದು ಬಸವಣ್ಣನ ವಿಗ್ರಹವಿದೆ. ಈ ಕಾಲುವೆಯನ್ನು ಬಸವಣ್ಣನ ಕಾಲುವೆ ಎನ್ನುವರು. ಇವುಗಳ ಮೂಲಕ ಅಚ್ಚುಕಟ್ಟು ಪ್ರದೇಶಗಳಿಗೆ ನೀರನ್ನು ಹಾಯಿಸಿ ಅಧಿಕವಾದ ಕೃಷಿಯನ್ನು ಬೆಳೆಯುತ್ತಾರೆ. ಮುಖ್ಯವಾಗಿ ಭತ್ತ, ತೆಂಗು, ಅಡಿಕೆ ಮತ್ತು ಬಾಳೆ ಮುಂತಾದ ಬೆಳೆಗಳಿಗೆ ಬಳಕೆಯಾಗುತ್ತಿದೆ. ಕೆರೆಯು ೧೫೧.೯೦ರಷ್ಟು ನೀರನ್ನು ಸಂಗ್ರಹಿಸುವ ಸಾಮರ್ಥ್ಯವನ್ನು ಹೊಂದಿದೆ. ೪೨೦ ಹೆಕ್ಟೇರ್‌ಗಳಷ್ಟು ಜಲವಿಸ್ತೀರ್ಣವಿದ್ದು, ೬೧ಕ್ಕೂ ಹೆಚ್ಚು

ಎಕರೆಯ ಅಚ್ಚುಕಟ್ಟು ಪ್ರದೇಶಗಳಿಗೆ ನೀರನ್ನು ಪೂರೈಸುತ್ತಿದೆ. ಅಲ್ಲದೆ ಮೀನುಗಾರಿಕೆ, ಜಾನುವಾರುಗಳಿಗೆ ಮತ್ತು ಬಟ್ಟೆ ತೊಳೆಯಲು ಉಪಯುಕ್ತವಾಗಿದೆ. ಕೆರೆಯ ಎರಡು ಕಡೆಯಲ್ಲಿಯೂ ಕೋಡಿಗಳಿದ್ದು, ಪಶ್ಚಿಮ ದಿಕ್ಕಿನ ಕೋಡಿ ಹತ್ತಿರ ಈಶ್ವರದೇವ ಸ್ಥಾನವಿದೆ. ಈ ಕೆರೆಯು ನೀರಾವರಿ ಇಲಾಖೆಯಿಂದ ರಕ್ಷಣೆಯನ್ನು ಪಡೆದಿದ್ದು ಜೀರ್ಣೋದ್ಧಾರವಾಗಿದೆ.

**ಸೂಳೆಕೆರೆ ಕೆರೆ**

ದಬ್ಬೇಘಟ್ಟ ಹೋಬಳಿಗೆ ಸೇರಿದ ಸೂಳೆಕೆರೆಯು ತುರುವೇಕೆರೆಯಿಂದ ೪ ಕಿ.ಮೀ. ದೂರದಲ್ಲಿದೆ. ಕೆರೆಯು ಗ್ರಾಮದ ಪೂರ್ವದಿಕ್ಕಿಗೆ ಇದೆ. ಸೂಳೆಕಲ್ಲಮ್ಮ ಈ ಕೆರೆಯನ್ನು ಕಟ್ಟಿಸಿದಳೆಂದು ಹೇಳುವರು. ಇಂದಿಗೂ ಕೆರೆಯ ಆಯಕಟ್ಟು ಪ್ರದೇಶದಲ್ಲಿ ಸೂಳೆಕಲ್ಲಮ್ಮ ಎಂದು ಕರೆಯುವ ಒಂದು ವೀರಗಲ್ಲು ಇದೆ. ಈ ಊರಿನ ಗ್ರಾಮದೇವತೆಯ ಜಾತ್ರೆಯ ದಿನದಂದು ಇದನ್ನು ಪೂಜೆ ಮಾಡುವ ಪ್ರತೀತಿ ಬೆಳೆದು ಬಂದಿದೆ. ಇದರಿಂದ ಗ್ರಾಮಕ್ಕೆ ಸೂಳೆಕೆರೆ ಎಂಬ ಹೆಸರು ಬಂದಿದೆ ಎನ್ನಬಹುದು. ಗ್ರಾಮದ ವೀರಭದ್ರಸ್ವಾಮಿ ದೇವಸ್ಥಾನದ ಒಳಭಾಗದಲ್ಲಿ ಹೊಯ್ಸಳ ಕಾಲದ ಒಂದು ವೀರಗಲ್ಲು ದೊರೆತಿದೆ. ಇದರಲ್ಲಿ ಹೊಯ್ಸಳ ಚಿಕ್ಕವೀರನು ಕಲ್ಲಕೆರೆ, ಸೂಳೆಕೆರೆ ಕೆರೆಯ ಕೆಳಗಿನ ಭೂಮಿಯನ್ನು ಹೋರಾಟ ಮಾಡಿ ಪಡೆದುದರ ಉಲ್ಲೇಖವಿದೆ.[೨೧] ಅದೇ ಗ್ರಾಮದ ಈಶ್ವರ ದೇವಸ್ಥಾನದ ಹತ್ತಿರ ವೀರಗಲ್ಲುಗಳು ಇದ್ದು, ಅದರಲ್ಲಿ ಕೆರೆಯ ಬಗ್ಗೆ ಯಾವುದೇ ಮಾಹಿತಿಗಳು ತಿಳಿದುಬಂದಿಲ್ಲ. ಪ್ರಸ್ತುತವಾಗಿ ಸೂಳೆಕೆರೆ ಕೆರೆಯ ಕೆಳಗಿನ ಭೂಮಿಯು ಕುಂಬಾರರು, ಒಕ್ಕಲಿಗರು ಮತ್ತು ಲಿಂಗಾಯಿತರು ಇನ್ನಿತರ ವರ್ಗಗಳಿಗೆ ಸಂಬಂಧಿಸಿದ್ದಾಗಿದೆ.

ಈ ಕೆರೆಗೆ ತುರುವೇಕೆರೆ ಕೆರೆಯಿಂದ ನೀರು ಹರಿದುಬರುತ್ತದೆ. ೧೯೩೦ರಷ್ಟು ಕೆರೆಯ ನೀರನ್ನು ಸಂಗ್ರಹಿಸುವ ಸಾಮರ್ಥ್ಯವನ್ನು ಹೊಂದಿದೆ. ಜಲವಿಸ್ತೀರ್ಣ ೭೦ ಹೆಕ್ಟೇರ್‌ಗಳಷ್ಟು ಇದ್ದು, ೧೧೯.೫೦ಕ್ಕೂ ಹೆಚ್ಚು ಎಕರೆಗಳಿಗೆ ನೀರನ್ನು ಪೂರೈಸುತ್ತಿದೆ. ಕೆರೆಯ ಏರಿಯೂ ಉತ್ತರ ಮತ್ತು ದಕ್ಷಿಣ ದಿಕ್ಕಿಗೆ ಅರ್ಧ ಇದ್ದು, ಪಶ್ಚಿಮ ಕಡೆಗೆ ಮುಂದುವರೆದಿದೆ. ಅಗಲ ೪ ಮೀ. ಮತ್ತು ಎತ್ತರ ೮ ಮೀ. ಇದೆ. ಉತ್ತರ ದಿಕ್ಕಿನ ಏರಿಯಿಂದ ೧೨ ಅಡಿ ದೂರದಲ್ಲಿ ಎರಡು ಕಲ್ಲು ಕಂಬಗಳ ಒಂದು ತೂಬಿನ ರಚನೆ ಇದೆ. ನಂತರ ಕೆರೆಯನ್ನು ಜೀರ್ಣೋದ್ಧಾರ ಮಾಡಿ ನೀರಾವರಿ ಇಲಾಖೆಯವರು ತೂಬನನ್ನು ಏರಿಗೆ ಯಾಂತ್ರೀಕರಿಸಿದ್ದಾರೆ. ಏರಿಯಿಂದ ಒಂದು ಕಾಲುವೆ ಹೊರ ಬಂದಿದ್ದು, ಇದರಿಂದ ಆಯಕಟ್ಟು ಪ್ರದೇಶಕ್ಕೆ ನೀರನ್ನು ಹಾಯಿಸಿ ವಿವಿಧ ಬೆಳೆಗಳನ್ನು ಬೆಳೆಯುತ್ತಾರೆ. ಮುಖ್ಯವಾಗಿ ಭತ್ತ, ತೆಂಗಿನ ತೋಟಗಳು ಇದ್ದವು. ಕೆರೆಯು ಎರಡು ಕೋಡಿಗಳನ್ನು ಹೊಂದಿದೆ. ಉತ್ತರ ದಿಕ್ಕಿನ ಕೋಡಿ ಹತ್ತಿರ ಊರಿನ ಗ್ರಾಮದೇವತೆಯಾದ ದೊಡ್ಡಮ್ಮನ ದೇವಸ್ಥಾನವಿದೆ. ದಕ್ಷಿಣ ದಿಕ್ಕಿನ ಕೋಡಿ ಹತ್ತಿರ ಗಣಪತಿ ದೇವಸ್ಥಾನವಿದೆ. ಈ ಕೆರೆಯು ಮೀನುಗಾರಿಕೆ ಮತ್ತು ಜಾನುವಾರುಗಳಿಗೆ ಹೆಚ್ಚು ಬಳಕೆಯಾಗುತ್ತಿದ್ದು,

೨೦೦೯ರಲ್ಲಿ ಸುಮಾರು ೪,೪೦೦ಕ್ಕೆ ವಿಲೇವಾರಿ ಆಗಿದೆ. ನೀರಾವರಿ ಇಲಾಖೆಯಿಂದ ರಕ್ಷಣೆಯನ್ನು ಪಡೆದು, ಬೆಳೆಯುತ್ತಿರುವ ಜನಸಂಖ್ಯೆಗೆ ಅನುಗುಣವಾಗಿ ಹೆಚ್ಚುತ್ತಿರುವ ಅಚ್ಚುಕಟ್ಟು ಪ್ರದೇಶಗಳಿಗೆ ನೀರನ್ನು ಒದಗಿಸುತ್ತದೆ.

**ರಾಮಸಾಗರ ಕೆರೆ**

ರಾಮಸಾಗರ ಕೆರೆಯು ಮಾಯಸಂದ್ರ ಕೆರೆಯಿಂದ ೩ ಕಿ.ಮೀ. ಮತ್ತು ತುರುವೇಕೆರೆಯಿಂದ ೧೪ ಕಿ.ಮೀ. ದೂರದಲ್ಲಿದೆ. ಈ ಗ್ರಾಮದಲ್ಲಿ ಹೊಯ್ಸಳ ಶೈಲಿಯನ್ನು ಹೊಂದಿದ ವರದರಾಜ ಸ್ವಾಮಿ ದೇವಸ್ಥಾನವಿದೆ. ಗ್ರಾಮದ ಪಶ್ಚಿಮ ದಿಕ್ಕಿನಲ್ಲಿ ಕೆರೆ ಇದೆ. ಅಲ್ಲಿರುವ ಭೌಗೋಳಿಕ ಪರಿಸರ ಮತ್ತು ಜಲಾನಯನ ಪ್ರದೇಶವನ್ನು ಗಮನಿಸಿ. ಬೆಟ್ಟದ ಕೆಳಗೆ ಕೆರೆಯನ್ನು ಕಟ್ಟಲಾಗಿದೆ. ಕೆರೆಯಿಂದ ಉತ್ತರ ದಿಕ್ಕಿಗೆ ಏರಿ ಇದ್ದು, ದಕ್ಷಿಣ ದಿಕ್ಕಿಗೆ ರಾಮಸಾಗರ ಬೆಟ್ಟ ಇದೆ. ಈ ಬೆಟ್ಟದ ಮೇಲೆ ಬಿದ್ದಂತಹ ಮಳೆಯ ನೀರು ಸಂಗ್ರಹವಾಗುವಂತೆ ಕೆರೆಯನ್ನು ನಿರ್ಮಿಸಲಾಗಿದೆ. ಕೆರೆಯ ಏರಿಯು ಪೂರ್ವ ಮತ್ತು ಪಶ್ಚಿಮಾಭಿಮುಖವಾಗಿ ಅರ್ಧಭಾಗ ಇದ್ದು, ನಂತರ ದಕ್ಷಿಣ ದಿಕ್ಕಿಗೆ ಮುಂದುವರೆದಿದೆ. ಏರಿಯ ಉದ್ದ ೧೨೫೦ ಮೀ. ಮತ್ತು ಅಗಲ ೩ ಮೀ. ಇದ್ದು ಕೆರೆಯಿಂದ ಪೂರ್ವದಕ್ಕಿಗೆ ಇದೆ. ಬೆಟ್ಟದ ಮೇಲೆ ಬೃಹತ್ ಗಾತ್ರದ ಬಂಡೆಯ ಕೆಳಭಾಗದಲ್ಲಿ ಮುನಿಯಪ್ಪ ಸ್ವಾಮಿಯ ಚಿಕ್ಕ ದೇವಸ್ಥಾನವಿದೆ. ಇಂದಿಗೂ ಆ ದೇವರಿಗೆ ಪೂಜೆ ನಡೆಯುತ್ತಿದ್ದು, ಜಾನುವಾರುಗಳಿಗೆ ಬಂದ ರೋಗವನ್ನು ಗುಣಪಡಿಸುತ್ತದೆ ಎಂಬ ನಂಬಿಕೆ ಇದೆ.

ಈ ಕೆರೆಗೆ ಬೆಟ್ಟದ ಮಧ್ಯದಿಂದ ಹೇಮಾವತಿ ಕಾಲುವೆಯನ್ನು ಅಳವಡಿಸಲಾಗಿದೆ. ಇದರಿಂದ ಕೆರೆಯು ಹೇಮಾವತಿ ನಾಲೆಯ ನೀರು ಅಥವಾ ಮಳೆಯ ನೀರಿನಿಂದ ತುಂಬಿ, ಹೆಚ್ಚುವರಿಯಾದ ನೀರು ಕೋಡಿಯ ಮೂಲಕ ಹೊರ ಬರುತ್ತದೆ. ಕೋಡಿಗೆ ಹೇಮಾವತಿ ಕಾಲುವೆಯನ್ನು ಜೋಡಿಸಲಾಗಿದೆ. ಕೆರೆಯು ೭೦.೭೭ರಷ್ಟು ನೀರಿನ ಸಂಗ್ರಹಣ ಸಾಮರ್ಥ್ಯವನ್ನು ಹೊಂದಿದೆ. ಜಲಾನಯನ ಪ್ರದೇಶವು ೩೨.೪೦ ಹೆಕ್ಟೇರ್ ಮತ್ತು ಅಚ್ಚುಕಟ್ಟು ಪ್ರದೇಶ ೨೮.೬೭ ಹೆಕ್ಟೇರ್‌ಗಳು. ಕೆರೆಯು ಒಂದು ಮರದ ತುಂಡನ್ನು ಹೊಂದಿದ ಒಂದು ತೂಬನ್ನು ಹೊಂದಿದೆ. ಇದನ್ನು ಏರಿಗೆ ಹೊಂದಿಕೊಂಡಿರುವಂತೆ ಏರಿಯ ಮಧ್ಯಭಾಗದಲ್ಲಿ ನಿರ್ಮಿಸಲಾಗಿದೆ. ತೂಬಿಗೆ ಅನುಸಾರವಾಗಿ ಒಂದು ಕಾಲುವೆ ಏರಿಯಿಂದ ಹೊರಬಂದಿದೆ. ಈ ಕಾಲುವೆಯ ಮೂಲಕ ನೀರನ್ನು ಆಯಕಟ್ಟು ಪ್ರದೇಶಕ್ಕೆ ಆಯಿಸಿ ಭತ್ತ, ತೆಂಗು, ಅಡಿಕೆ ಮತ್ತು ಬಾಳೆ ಮುಂತಾದ ಏಕದಳ ಮತ್ತು ದ್ವಿದಳ ಬೆಳಗಳನ್ನು ಬೆಳೆಯುತ್ತಾರೆ. ಮೀನುಗಾರಿಕೆಗೆ ಹೆಚ್ಚು ಉಪಯುಕ್ತವಾಗಿದೆ. ಆರ್ಥಿಕವಾಗಿ ಹಿಂದುಳಿದಿರುವ ಕುಟುಂಬಗಳಿಗೆ ಮೀನುಸಾಕಣಿಕೆಯನ್ನು ತಮ್ಮ ಉದ್ಯೋಗವನ್ನಾಗಿ ಮಾಡಿಕೊಂಡಿದ್ದಾರೆ. ಈ ಕೆರೆಯಲ್ಲಿ ಹೂಳೆತ್ತಿಸಿ ಜಲವಿಸ್ತೀರ್ಣವನ್ನು ವಿಸ್ತರಿಸಿದರೆ ಹೆಚ್ಚು ಆಯಕಟ್ಟು ಪ್ರದೇಶಗಳಿಗೆ ನೀರನ್ನು ಹಾಯಿಸಿ ಅಧಿಕ ಕೃಷಿಯನ್ನು ಬೆಳೆಯಬಹುದು.

### ವೀರಸಾಗರ ಕೆರೆ

ವೀರಸಾಗರ ಕೆರೆಯು ಸಂಪಿಗೆಯಿಂದ ೧ ಕಿ.ಮೀ. ಮತ್ತು ತುರುವೇಕೆರೆಯಿಂದ ೧೬ ಕಿ.ಮೀ. ದೂರದಲ್ಲಿದೆ. ಈ ಕೆರೆಯ ಮುಂಭಾಗದಲ್ಲಿ ಚೌಡೇಶ್ವರಿ ದೇವಾಲಯದ ಹತ್ತಿರ ಮೆಂಟಿಲು ರೀತಿಯ ಕಲ್ಲಿನ ರಚನೆ ಮತ್ತು ವಸತಿ ದಿಬ್ಬಗಳು ಕಂಡುಬಂದಿವೆ. ಇಲ್ಲಿನ ವೀರರ ನೆಲೆ ಮತ್ತು ಜಲಾನಯನ ಪ್ರದೇಶ ಸೇರಿ ವೀರಸಾಗರ ಎಂದು ಹೆಸರು ಬಂದಿರಬಹುದು. ಇಂದು ವಸತಿ ದಿಬ್ಬಗಳ ಮೇಲೆ ಮೀನುಗಾರರ ಗೂಡಿಸಲುಗಳು ಇವೆ. ಕೆರೆಯು ಗ್ರಾಮದಿಂದ ಪೂರ್ವದಿಕ್ಕಿಗೆ ಇದೆ. ೩೮.೨೦ರಷ್ಟು ನೀರಿನ ಸಂಗ್ರಹಣ ಸಾಮರ್ಥ್ಯವನ್ನು ಹೊಂದಿದೆ. ೮೬ ಹೆಕ್ಟೇರ್‌ಗಳಷ್ಟು ಜಲ ವಿಸ್ತೀರ್ಣವನ್ನು ಹೊಂದಿದ್ದು, ೨೧೨.೫೦ಕ್ಕೂ ಹೆಚ್ಚು ಎಕರೆಗಳಿಗೆ ನೀರನ್ನು ಪೂರೈಸುತ್ತಿದೆ. ಕೆರೆಯಿಂದ ಪೂರ್ವ ದಿಕ್ಕಿಗೆ ಏರಿ ನಿರ್ಮಾಣವಾಗಿದೆ. ಏರಿಯ ಉದ್ದ ೧ ಕಿ.ಮೀ. ಅಗಲ ೨ ಮೀ. ಮತ್ತು ಬಾಗಿದ ಎತ್ತರ ೬.೫ ಮೀ. ಇದೆ. ಕೆರೆಯಲ್ಲಿ ಎರಡು ತೂಬುಗಳಿದ್ದು, ಒಂದು ತೂಬು ಉತ್ತರ ದಿಕ್ಕಿನ ಏರಿಯ ಸಮೀಪದಲ್ಲಿ ಇದ್ದರೆ ಮತ್ತೊಂದು ತೂಬು ದಕ್ಷಿಣ ಏರಿಯಿಂದ ೨ ಅಡಿ ದೂರದಲ್ಲಿ ಇದೆ. ಎರಡು ತೂಬುಗಳು ಕೂಡ ಮರದ ತುಂಡುಗಳನ್ನು ಹೊಂದಿವೆ. ಕೆರೆಯ ಎರಡು ಕಾಲುವೆಗಳು ಇದ್ದು ಅವುಗಳನ್ನು ತೂಬಿಗೆ ಅನುಸಾರವಾಗಿ ನಿರ್ಮಿಸಲಾಗಿದೆ. ಕೆರೆಯಲ್ಲಿ ಎರಡು ಕೋಡಿಗಳಿದ್ದು ಒಂದು ದಕ್ಷಿಣ ಮತ್ತೊಂದು ಉತ್ತರ ದಿಕ್ಕಿನಲ್ಲಿ ಇವೆ. ದಕ್ಷಿಣ ದಿಕ್ಕಿನ ಕೋಡಿಯನ್ನು ಅರ್ಧಚಂದ್ರಾಕೃತಿಯಲ್ಲಿ ರಚಿಸಲಾಗಿದೆ. ಕೆರೆಯು ಮೀನುಗಾರಿಕೆ, ಬಟ್ಟೆ ತೊಳೆಯಲು ಮತ್ತು ಜಾನುವಾರುಗಳಿಗೆ ಹೆಚ್ಚು ಬಳಕೆಯಾಗುತ್ತಿದ್ದು, ವಿಲೇವಾರಿಯಾಗುತ್ತಿದೆ. ೨೦೦೯ರಲ್ಲಿ ಸುಮಾರು ೧೧,೫೭೬ರಷ್ಟಕ್ಕೆ ವಿಲೇವಾರಿ ಆಗಿದೆ. ಈ ಕೆರೆಯನ್ನು ಜೀರ್ಣೋದ್ಧಾರ ಮಾಡಿದರೆ ಆರ್ಥಿಕವಾಗಿ ತೊಂದರೆ ಒಳಗಾದ ಜನರು ಕೃಷಿ ಉತ್ಪಾದನೆಯನ್ನು ಹೆಚ್ಚಿಸಿಕೊಂಡು ತಮ್ಮ ಜೀವನವನ್ನು ಸುಧಾರಿಸಿಕೊಳ್ಳಲು ಸಹಾಯಕವಾಗುತ್ತದೆ ಎನ್ನಬಹುದು.

### ತುಯಲಹಳ್ಳಿ ಕೆರೆ

ತುಯಲಹಳ್ಳಿ ಕೆರೆಯು ಮಾಯಸಂದ್ರದಿಂದ ೧೦ ಕಿ.ಮೀ. ಮತ್ತು ತುರುವೇಕೆರೆಯಿಂದ ೨೦ ಕಿ.ಮೀ. ದೂರದಲ್ಲಿ ಗ್ರಾಮದ ಉತ್ತರ ದಿಕ್ಕಿಗೆ ಕೆರೆ ಇದೆ. ಈ ಕೆರೆಯನ್ನು ಯಾರು ಕಟ್ಟಿಸಿದರು ಎಂಬುದಕ್ಕೆ ದಾಖಲೆಗಳು ದೊರೆತಿಲ್ಲ. ಕೆರೆಯ ಏರಿಯ ಪೂರ್ವ ಮತ್ತು ಪಶ್ಚಿಮಾಭಿಮುಖವಾಗಿದ್ದು, ಕೆರೆಯಿಂದ ಏರಿಯು ಪೂರ್ವ ದಿಕ್ಕಿಗೆ ಇದೆ. ಏರಿಯ ಉದ್ದ ಸುಮಾರು ೧.೫೮ ಮೀ. ಮತ್ತು ಮೇಲ್ಭಾಗದ ಅಗಲ ಎರಡು ಮೀ. ಇದೆ. ಕೆರೆಯಲ್ಲಿ ಎರಡು ತೊಬುಗಳು ಇದ್ದು ಪೂರ್ವದಿಕ್ಕಿನ ಏರಿಗೆ ಹೊಂದಿಕೊಂಡಂತೆ ಮರದ ತುಂಡಿನಿಂದ ರಚನೆಯಾದ

ಒಂದು ತೂಬು ಇದೆ. ಮತ್ತೊಂದು ತೂಬು ಪಶ್ಚಿಮ ದಿಕ್ಕಿನ ಏರಿಯಿಂದ ೮ ಅಡಿ ದೂರದಲ್ಲಿದ್ದು ಹಾನಿಗೊಳಗಾಗಿದೆ. ಕರೆಯ ಏರಿಯಿಂದ ಹೊರ ಬಂದ ಎರಡು ಕಾಲುವೆಗಳಿವೆ. ಇವುಗಳಿಂದ ಆಯಕಟ್ಟು ಪ್ರದೇಶಕ್ಕೆ ನೀರನ್ನು ಹಾಯಿಸಿ, ವಿವಿಧ ಬೆಳೆಗಳನ್ನು ಬೆಳೆಯುತ್ತಾರೆ. ಮುಖ್ಯವಾಗಿ ಭತ್ತ, ತೆಂಗು, ಹೆಸರು ಇದ್ದವು. ಕೆರೆಯ ಹೆಚ್ಚುವರಿ ನೀರು ಹೊರ ಹೋಗುವಂತೆ ಪಶ್ಚಿಮ ದಿಕ್ಕಿನಲ್ಲಿ ಒಂದು ಕೋಡಿಯನ್ನು ಹೊಂದಿದೆ. ಇದು ಸುಮಾರು ೬೫ ಅಡಿ ಉದ್ದವಿದೆ.

ಈ ಕೆರೆಯು ಮಳೆ ನೀರಿನಿಂದ ತುಂಬುತ್ತಿದ್ದು, ಇತ್ತೀಚೆಗೆ ಹೇಮಾವತಿ ನಾಲೆಯ ನೀರನ್ನು ಬಿಡಬೇಕೆಂಬ ಕಾರ್ಯಚರಣೆ ನಡೆಯುತ್ತಿದೆ. ೧೦೮ ಹೆಕ್ಟೇರ್ ಜಲವಿಸ್ತೀರ್ಣವಿದ್ದು, ೧೯೭೬೭ಕ್ಕೂ ಹೆಚ್ಚು ಎಕರೆಗಳಿಗೆ ನೀರನ್ನು ಒದಗಿಸುವ ಸಾಮರ್ಥ್ಯವನ್ನು ಹೊಂದಿದೆ. ಈ ಕೆರೆಯು ನೀರಾವರಿ ಇಲಾಖೆಯಿಂದ ರಕ್ಷಣೆಯನ್ನು ಪಡೆದಿದ್ದರು. ಜೀರ್ಣೋದ್ಧಾರವಾಗದೆ ಹೂಳು ತುಂಬಿದೆ. ಕೆರೆಯನ್ನು ದುರಸ್ತಿಗೊಳಿಸಿ, ಹೂಳೆತ್ತಿಸಿದರೆ ಹೆಚ್ಚು ಅಚ್ಚುಕಟ್ಟು ಪ್ರದೇಶಗಳಿಗೆ ನೀರನ್ನು ಪೂರೈಸಿ ಅಧಿಕವಾದ ಕೃಷಿ ಬೆಳೆಯಲು ಸಹಾಯಕವಾಗುತ್ತದೆ ಎನ್ನಬಹುದು. ಇದರ ಉಸ್ತುವಾರಿಕೆಗೆ ಸಂಬಂಧಿಸಿದ ಗ್ರಾಮಪಂಚಾಯಿತ್ ಇತ್ತ ಗಮನ ಹರಿಸಬೇಕು. ಇಂದು ಕೆರೆಯ ನೀರು ಮೀನುಗಾರಿಕೆ, ಇಟ್ಟಿಗೆ ತಯಾರಿಕೆ, ಜಾನುವಾರಗಳಿಗೆ ಉಪಯೋಗವಾಗುತ್ತಿದೆ. ಕೆರೆಯಲ್ಲಿ ನೀರಿಲ್ಲದಂತಹ ಸಂದರ್ಭದಲ್ಲಿ ಕೆರೆಯ ಮಣ್ಣನ್ನು ಬಳಸಿಕೊಂಡು ಇಟ್ಟಿಗೆ ತಯಾರಿಸಿಕೊಂಡು ಹೆಚ್ಚಿನ ಲಾಭವನ್ನು ಪಡೆಯುತ್ತಿದ್ದರು. ಇದರಿಂದ ಹೆಚ್ಚು ಜನರಿಗೆ ಉದ್ಯೋಗ ದೊರಕಿಸಿಕೊಟ್ಟಂತಾಗುತ್ತದೆ. ವಾರ್ಷಿಕಾಗಿ ಈ ಕೆರೆಯು ೨೦೦೯ರಲ್ಲಿ ೧೭೩೭ರಷ್ಟಕ್ಕೆ ವಿಲೇವಾರಿಯಾಗಿದೆ. ಕೆರೆಯ ಪೂರ್ವ ದಕ್ಕಿನ ಏರಿಯ ಪಕ್ಕದಲ್ಲಿ ಇತ್ತೀಚಿನ ಶನಿಮಹದೇವ ದೇವಸ್ಥಾನವಿದೆ.

## ದುಮ್ಮೇನಹಳ್ಳಿ ಕೆರೆ

ತುರುವೇಕೆರೆಯಿಂದ ೧೫ ಕಿ.ಮೀ. ರಾಮಸಾಗರಿಂದ ೧೩ ಕಿ.ಮೀ. ದೂರದಲ್ಲಿದೆ. ಇದು ಒಂದು ಪುರಾತನ ಗ್ರಾಮ. ಸ್ಥಳಪುರಾಣದ ಪ್ರಕಾರ ದುಮ್ಮಿಒಡೆಯರ ರಾಜಧಾನಿಯಾಗಿತ್ತೆಂದು ತಿಳಿದುಬರುತ್ತದೆ.[೨೨] ಈ ಗ್ರಾಮದಲ್ಲಿ ಪುರಾತನ ಚಿನ್ನದ ನಾಣ್ಯಗಳು ದೊರಕಿದ್ದವು ಎಂಬ ಹೇಳಿಕೆ ಇದೆ. ಕೆರೆಯು ಮಾಚೇನಹಳ್ಳಿಯಿಂದ ಉತ್ತರಕ್ಕೆ ಮತ್ತು ದುಮ್ಮೇನಹಳ್ಳಿಯಿಂದ ದಕ್ಷಿಣ ದಿಕ್ಕಿಗೆ ಇದೆ. ಕೆರೆಯನ್ನು ಮಾಚೇನಹಳ್ಳಿ ಮತ್ತು ದುಮ್ಮೇಹಳ್ಳಿ ಕೆರೆಯೆಂದು ಗ್ರಾಮಗಳ ಹೆಸರುಗಳಿಂದ ಕರೆಯುತ್ತಾರೆ. ಈ ಕೆರೆಯನ್ನು ಯಾರು ನಿರ್ಮಿಸಿದರು ಎಂಬುದರ ಬಗ್ಗೆ ಖಚಿತವಾದ ಮಾಹಿತಿ ದೊರೆಯುವುದಿಲ್ಲ. ಕೆರೆಯ ರಚನೆ ಅಥವಾ ವಿನ್ಯಾಸವು ಹೊಯ್ಸಳ ಕಾಲಕ್ಕೆ ಸಂಬಂಧಿಸಿದಂತೆ ಕಂಡುಬರುತ್ತದೆ.

ಕೆರೆಗೆ ಹೇಮಾವತಿ ನಾಲೆಯ ನೀರು ಹರಿದುಬರುತ್ತದೆ. ೯.೧೩ ಟಿ.ಎಂ.ಸಿ.ಯಷ್ಟು ಕೆರೆಯು ನೀರಿನ ಸಂಗ್ರಹಣ ಸಾಮರ್ಥ್ಯವನ್ನು ಹೊಂದಿದೆ. ೩೮.೪೧ ಹೆಕ್ಟೇರು ಜಲವಿಸ್ತೀರ್ಣ ಮತ್ತು ಅಚ್ಚುಕಟ್ಟು ಪ್ರದೇಶ ೧೭.೪೩ ಹೆಕ್ಟೇರ್‌ಗಳಷ್ಟು ಕೆರೆಯ ಏರಿಯು ಉತ್ತರ ಮತ್ತು ದಕ್ಷಿಣಾಭಿಮುಖವಾಗಿ ಇದ್ದು, ಕೆರೆಯಿಂದ ಪೂರ್ವ ದಿಕ್ಕಿಗೆ ಇದೆ. ಏರಿಯು ಸುಮಾರು ೧ ಕಿ.ಮೀ. ಉದ್ದ ಮತ್ತು ೨.೫. ಮೀ. ಅಗಲವನ್ನು ಹೊಂದಿದೆ. ಕೆರೆಯಲ್ಲಿ ಎರಡು ಮರದ ತುಂಡಿನ ತೂಬುಗಳಿದ್ದು, ಇವುಗಳನ್ನು ಏರಿಗೆ ಅಳವಡಿಸಲಾಗಿದೆ. ಈ ತೂಬುಗಳಿಗೆ ಅನುಸಾರವಾಗಿ ಎರಡು ಕಾಲುವೆಗಳು ಏರಿಯಿಂದ ಹೊರಬಂದಿವೆ. ಇವುಗಳಿಂದ ಆಯಕಟ್ಟು ಪ್ರದೇಶಕ್ಕೆ ನೀರನ್ನು ಹಾಯಿಸಿ ವಿವಿಧ ಬೆಳೆಗಳನ್ನು ಬೆಳೆಯಲಾಗುತ್ತದೆ. ಮುಖ್ಯವಾಗಿ ಭತ್ತದ ಗದ್ದೆ ಕಂಡುಬಂದಿದೆ. ಕೆರೆಯ ರಕ್ಷಣೆಯ ದೃಷ್ಟಿಯಿಂದ ಉತ್ತರ ದಿಕ್ಕಿಗೆ ಒಂದು ಕೋಡಿ ಇದ್ದು, ಕೆರೆಯ ಹೆಚ್ಚುವರಿ ನೀರು ಇದರ ಮೂಲಕ ಹೊರಹೋಗುತ್ತದೆ. ಕೆರೆಯ ಅಂಗಳದಲ್ಲಿ ಎರಡು ಕೊಳವೆ ಬಾವಿ (ಕಲ್ಲಿನ ಬಾವಿ) ಮತ್ತು ಒಂದು ಪುಷ್ಕರಣಿ ಇದೆ. ಹಿಂದೆ ಕೆರೆಯು ಮಳೆ ನೀರನ್ನು ಅವಲಂಬಿಸಿದ್ದರಿಂದ ಜನಸಾಮಾನ್ಯರು ಇವುಗಳ ಉಪಯೋಗವನ್ನು ಪಡೆಯುತ್ತಿದ್ದರು.

ಬಾವಿಯ ನೀರನ್ನು ಕುಡಿಯಲು ಮತ್ತು ಪುಷ್ಕರಣಿಯ ನೀರನ್ನು ದೇವಸ್ಥಾನಗಳ ಪೂಜೆಗೆ ಉಪಯೋಗಿಸುತ್ತಿದ್ದರು. ಪ್ರಸ್ತುತ ದಿನಗಳಲ್ಲಿ ಬೋರ್‌ವೆಲ್‌ಗಳು ಜನಸಾಮಾನ್ಯರ ಕುಡಿಯುವ ನೀರಿಗಾಗಿ ಹೆಚ್ಚು ಬಳಕೆಯಾಗುತ್ತಿವೆ. ಇದರಿಂದ ಬಾವಿ ಮತ್ತು ಪುಷ್ಕರಣಿಗಳ ನೀರಿನ ಬಳಕೆ ಕಡಿಮೆಯಾಗಿ ಅವುಗಳ ರಕ್ಷಣೆ ಇಲ್ಲದಂತಾಗಿದೆ. ಕೆರೆಗೆ ಹೇಮಾವತಿ ನಾಲೆಯ ನೀರು ಹರಿದು ಬರುವುದರಿಂದ ಕೆರೆಯಲ್ಲಿ ಹೂಳು ತುಂಬಿಕೊಂಡಿದೆ. ಇದರಿಂದಾಗಿ ಕೆರೆಯು ಅಧಿಕವಾಗುತ್ತಿದ್ದ ಜನಸಂಖ್ಯೆಯ ಅವಶ್ಯಕತೆಗಳನ್ನು ಪೂರೈಸಲು ಅಸಮರ್ಪಕವಾಗುತ್ತದೆ. ಕೆರೆಯಲ್ಲಿ ಹೂಳನ್ನು ತೆಗೆಸಿ ಆಳ ಮತ್ತು ವಿಸ್ತೀರ್ಣವನ್ನು ಹೆಚ್ಚಿಸಬೇಕು. ಈ ರೀತಿಯಾದ ಕಾರ್ಯ ಕೈಗೊಳ್ಳುವುದರಿಂದ ಹೆಚ್ಚಿನ ಜನರಿಗೆ ಉದ್ಯೋಗ ಮತ್ತು ಆರ್ಥಿಕ ವ್ಯವಸ್ಥೆಯನ್ನು ಸುಧಾರಿಸುತ್ತದೆ. ಅಲ್ಲದೆ ಮೀನುಗಾರಿಕೆಗೆ ಹೆಚ್ಚು ಬಳಕೆಯಾಗುತ್ತದೆ ಎನ್ನಬಹುದು. ಇಂತಹ ಕಾರ್‍ಯಾಚರಣೆಗಳ ಕಡೆಗೆ ತಾಲೂಕು ಮತ್ತು ಗ್ರಾಮಪಂಚಾಯ್‌ಗಳು ಗಮನ ಹರಿಸಬೇಕು.

### ಬೊಮ್ಮೇನಹಳ್ಳಿ ಕೆರೆ

ತುರುವೇಕೆರೆ ಪರಿಸರದಲ್ಲಿ ಬರುವ ಕೆರೆಗಳಲ್ಲಿ ಬೊಮ್ಮೇನಹಳ್ಳಿ ಕೆರೆಯು ಒಂದು. ಈ ಕೆರೆಯು ಬಾಣಸಂದ್ರದಲ್ಲಿ ೮ ಕಿ.ಮೀ. ಮತ್ತು ತುರುವೇಕೆರೆಯಿಂದ ೧೨ ಕಿ.ಮೀ. ದೂರದಲ್ಲಿದೆ. ಬೊಮ್ಮೇನಹಳ್ಳಿಯಲ್ಲಿ ಪುರಾತತ್ವ ವಸ್ತುಗಳು ಸಿಕ್ಕಿದ್ದರಿಂದ ಗ್ರಾಮವನ್ನು ಈ ಹೆಸರಿನಿಂದ ಕರೆದಿರಬಹುದು. ಈ ಗ್ರಾಮದ ಬೆಟ್ಟದ ಸಾಲಿನಲ್ಲಿ ಆದಿ ಹಳೆಶಿಲಾಯುಗ ಮತ್ತು ಮಧ್ಯ

ಹಳೆಶಿಲಾಯುಗದ ಅನೇಕ ಉಪಕರಣಗಳು ದೊರೆಕಿವೆ ಎಂಬುದಾಗಿ ಶಿವತಾರಕ್‌ರವರು 'ಕರ್ನಾಟಕ ಪುರಾತತ್ವ ನೆಲೆಗಳು' ಎಂಬ ಪುಸ್ತಕದಲ್ಲಿ ಉಲ್ಲೇಖಿಸಿದ್ದಾರೆ. ಕೆರೆಯು ಗ್ರಾಮದ ದಕ್ಷಿಣ ದಿಕ್ಕಿಗೆ ಇದೆ. ಕೆರೆಗೆ ಸಂಬಂಧಿಸಿದ ಯಾವುದೇ ಶಾಸನಗಳು ಅಥವಾ ವೀರಗಲ್ಲುಗಳು ದೊರೆತಿಲ್ಲ. ಪ್ರಸ್ತುತ ಕ್ಷೇತ್ರಕಾರ್ಯದಲ್ಲಿ ಕಂಡುಕೊಂಡ ವಿಷಯವನ್ನು ಈ ಕೆಳಗಿನಂತೆ ವಿವರಿಸಿದ್ದೇನೆ. ಕೆರೆಯನ್ನು ಒಂದು ನಿರ್ದಿಷ್ಟವಾದ ಸ್ಥಳದಲ್ಲಿ ವ್ಯವಸ್ಥಿತವಾಗಿ ನಿರ್ಮಿಸಲಾಗಿದೆ. ಕೆರೆಯ ಉತ್ತರ ದಿಕ್ಕಿಗೆ ರಂಗಸ್ವಾಮಿ ಅಥವಾ ಬೊಮ್ಮೇನಹಳ್ಳಿ ಬೆಟ್ಟವಿದೆ. ಇದು ಕೆರೆಯಿಂದ ಸ್ವಲ್ಪ ದೂರದಲ್ಲಿಯೇ ಇದೆ. ಕೆರೆಯ ಏರಿಯು ಉತ್ತರ ಮತ್ತು ದಕ್ಷಿಣಾಭಿಮುಖವಾಗಿದ್ದು, ಕೊನೆಯ ಭಾಗವು ಪಶ್ಚಿಮಕ್ಕೆ ತಿರುಗಿದೆ. ಹಾಗೂ ಕೆರೆಯಿಂದ ಪೂರ್ವ ದಿಕ್ಕಿಗೆ ಏರಿ ಇದೆ. ಏರಿಯ ಉದ್ದ ೭೫೦ ಮೀ ಮತ್ತು ಅಗಲ ೨ ಮೀ. ಇದೆ. ಏರಿಯನ್ನು ಕಟ್ಟಲು ದಪ್ಪ ದಪ್ಪ ಕಲ್ಲುಗಳನ್ನು ಜೋಡಿಸಿ ಅದರ ಮೇಲೆ ಮಣ್ಣನ್ನು ಹಾಕಿ ನಿರ್ಮಿಸಿದ್ದಾರೆ.. ಇಂದು ಕೆರೆಯು ದುರಸ್ತಿಯಾಗದೆ ಏರಿಯ ಕಲ್ಲುಗಳು ಅಲ್ಲಲ್ಲಿ ಕಿತ್ತು ಹೋಗಿವೆ. ಏರಿಯ ಮೇಲೆ ಓಡಾಡಲು ಸಾಧ್ಯವಾಗದಂತೆ ಮುಳ್ಳಿನ ಗಿಡಗಳು ಬೆಳೆದಿದೆ. ಈ ಕೆರೆಯು ನೀರಾವರಿ ಇಲಾಖೆಯ ವ್ಯಾಪ್ತಿಯಲ್ಲಿ ಬರುವುದರಿಂದ ಇದಕ್ಕೆ ಸಂಬಂಧಪಟ್ಟ ಅಧಿಕಾರಿಗಳು ಗಮನ ಹರಿಸಬೇಕು. ಇಲ್ಲದಿದ್ದರೆ ಮುಂದಿನ ಪೀಳಿಗೆಗೆ ಕೆರೆಯೇ ಇಲ್ಲದಂತಾಗುತ್ತದೆ.

ಕೆರೆಯು ೩೨ ಹೆಕ್ಟೇರುಗಳಷ್ಟು ಜಲ ವಿಸ್ತೀರ್ಣವನ್ನು ಹೊಂದಿದ್ದು, ೯೪ ಹೆಕ್ಟೇರ್‌ಗಳಿಗೂ ಅಧಿಕವಾದ ಅಚ್ಚುಕಟ್ಟು ಪ್ರದೇಶಗಳಿಗೆ ನೀರನ್ನು ಪೂರೈಸುವ ಸಾಮರ್ಥ್ಯವನ್ನು ಹೊಂದಿದೆ. ಕೆರೆಯಲ್ಲಿ ಎರಡು ತೂಬುಗಳಿದ್ದು, ಒಂದು ತೂಬನ್ನು ಉತ್ತರ ದಿಕ್ಕಿನ ಏರಿಗೆ ಮತ್ತೊಂದು ತೂಬನ್ನು ದಕ್ಷಿಣ ದಿಕ್ಕಿನ ಏರಿಗೆ ಅಳವಡಿಸಲಾಗಿದೆ. ತೂಬುಗಳಿಗೆ ಅನುಗುಣವಾಗಿ ಏರಿಯಿಂದ ಎರಡು ಕಾಲುವೆಗಳು ಹೊರ ಬಂದಿವೆ. ಅವುಗಳಿಂದ ಅಚ್ಚುಕಟ್ಟು ಪ್ರದೇಶಕ್ಕೆ ನೀರನ್ನು ಹಾಯಿಸಿ ಭತ್ತ, ತೆಂಗು, ಇನ್ನಿತರ ಬೆಳೆಗಳನ್ನು ಬೆಳೆಯಲಾಗುತ್ತದೆ. ಹಿಂದಿನಿಂದಲೂ ಕೆರೆಯಲ್ಲಿ ನೀರು ಬಂದಾಗ ನೀರಿನ ನಿರ್ವಹಣೆಯನ್ನು ನೀರ್ಗಂಟಿಗಳು ನೋಡಿಕೊಳ್ಳುತ್ತಿದ್ದರು. ಇವರಿಗೆ ವೇತನವನ್ನು ಕೆರೆಗೆ ಸಂಬಂಧಪಟ್ಟ ಇಲಾಖೆಯಿಂದ ನೀಡಲಾಗುತ್ತಿತ್ತು. ಸ್ಥಳೀಯ ಗ್ರಾಮದ ಜನರು ಇವರಿಗೆ ದವಸ ಧಾನ್ಯಗಳನ್ನು ನೀಡುತ್ತಿದ್ದರು.

ಕೆರಗೆ ಹೇಮಾವತಿ ನಾಲೆಯ ನೀರು ಹರಿದುಬರುವುದರಿಂದ ಕೆರೆಯಲ್ಲಿ ಹೂಳು ತುಂಬಿಕೊಂಡಿದೆ. ಈ ಕೆರೆಯಲ್ಲಿ ನೀರಿಲ್ಲದ ಸಂದರ್ಭದಲ್ಲಿ ಕೆರೆ ಎಂದು ಗುರುತಿಸುವುದೇ ಕಷ್ಟಸಾಧ್ಯ. ಕೆರೆಗೆ ಸಂಬಂಧಿಸಿದ ಇಲಾಖೆಯವರು ಕೆರೆಯಲ್ಲಿ ಹೂಳೆತ್ತಿಸಿದರೆ ಕೆರೆಯ ಆಳ ಮತ್ತು ಅಗಲವಾದ ವಿಸ್ತೀರ್ಣವು ಹೆಚ್ಚಾಗುತ್ತದೆ. ಇದರಿಂದ ಅಧಿಕವಾದ ಆಯಕಟ್ಟು ಪ್ರದೇಶಕ್ಕೆ ನೀರನ್ನು ಹಾಯಿಸಲು ಸಹಾಯಕವಾಗುತ್ತದೆ ಹಾಗೂ ಮೀನುಗಾರಿಕೆಗೆ ಹೆಚ್ಚು ಬಳಕೆಯಾಗುತ್ತದೆ. ಪ್ರಸ್ತುತ ದಿನಗಳಲ್ಲಿ ಕೆರೆಯು ವಾರ್ಷಿಕವಾಗಿ ೨,೪೦೦ಕ್ಕೆ ವಿಲೇವಾರಿಯಾಗಿದೆ.

## ಮಾವಿನಕೆರೆ ಕೆರೆ

ಮಾಯಸಂದ್ರ ಹೋಬಳಿಯಲ್ಲಿ ಬರುವ ಮಾವಿನ ಕೆರೆಯು ತುರುವೇಕೆರೆಯಿಂದ ೧೦ ಕಿ.ಮೀ. ದೂರದಲ್ಲಿದೆ. ಕೆರೆಯು ಗ್ರಾಮದ ಉತ್ತರ ದಿಕ್ಕಿಗೆ ಇದೆ. ಈ ಕೆರೆಯಲ್ಲಿ ಯಾರು ಕಟ್ಟಿಸಿದರು ಎಂಬುದರ ಬಗ್ಗೆ ಮಾಹಿತಿಗಳು ಲಭ್ಯವಿಲ್ಲ. ಕೆರೆಯ ಏರಿಯು ಉತ್ತರ ಮತ್ತು ದಕ್ಷಿಣಾಭಿಮುಖವಾಗಿದ್ದು, ಕೆರೆಯಿಂದ ಪೂರ್ವದಿಕ್ಕಿಗೆ ಇದೆ. ಏರಿಯ ಉದ್ದ ಸುಮಾರು ೧ ಕಿ.ಮೀ. ಮತ್ತು ಅಗಲ ೩ ಮೀ. ಇದೆ. ಏರಿಯ ಒಳಭಾಗದ ರಚನೆಯವು ಕಲ್ಲು ಕಟ್ಟಡದಂತೆ ಕಂಡುಬಂದಿದೆ. ಕೆರೆಯನ್ನು ಒಂದು ವ್ಯವಸ್ಥಿತವಾದ ಸ್ಥಳದಲ್ಲಿ ಕ್ರಮಬದ್ಧವಾಗಿ ನಿರ್ಮಿಸಲಾಗಿದೆ. ಇದರ ಉಪಯೋಗವನ್ನು ಜನರು ಇಂದಿಗೂ ಪಡೆಯುತ್ತಿದ್ದಾರೆ. ಕೆರೆಯ ದಕ್ಷಿಣ ದಿಕ್ಕಿನಲ್ಲಿ ಗ್ರಾಮದ ಜನರಿಗೆ ನೀರಿನ ಬಳಕೆಗಾಗಿ ಮೆಟ್ಟಿಲುಗಳಿವೆ. ಅದೇ ರೀತಿ ಉತ್ತರ ದಿಕ್ಕಿಗೆ ಒಂದು ಕೋಡಿಯನ್ನು ಹೊಂದಿದೆ. ಹಾಗೂ ಪಶ್ಚಿಮ ದಿಕ್ಕಿನ ಕೆರೆಯ ಅಂಗಳದಲ್ಲಿ ಮಾಸ್ತಮ್ಮ ಮತ್ತು ಪೂರ್ವ ದಿಕ್ಕಿನ ಏರಿಯ ಪಕ್ಕದಲ್ಲಿ ಮಾವಿನ ಕೆರೆಯಮ್ಮ ದೇವಸ್ಥಾನವಿದೆ. ಈ ದೇವಸ್ಥಾನದ ಆವರಣದಲ್ಲಿ ಪ್ರತಿ ಶುಕ್ರವಾರ ಸಂತೆ ಮಾರುಕಟ್ಟೆ ನಡೆಯುತ್ತದೆ. ಇದರಿಂದಾಗಿ ಕೆರೆಯಲ್ಲಿ ಕೊಳೆತ ತರಕಾರಿಗಳನ್ನು ಎಸೆಯುವುದರಿಂದ ಕೆರೆಯ ನೈರ್ಮಲ್ಯವು ಹಾಳಾಗುತ್ತಿದೆ ಎನ್ನಬಹುದು.

ಕೆರೆಯು ೨.೯೦ ಹೆಕ್ಟೇರ್‌ಗಳಷ್ಟು ಜಲ ವಿಸ್ತೀರ್ಣವನ್ನು ಹೊಂದಿದ್ದು, ೧೯.೬೩ ಹೆಕ್ಟೇರ್ ಅಚ್ಚುಕಟ್ಟು ಪ್ರದೇಶಗಳಿಗೆ ನೀರನ್ನು ಪೂರೈಸುವ ಸಾಮರ್ಥ್ಯವನ್ನು ಹೊಂದಿದೆ. ಕೆರೆಯಲ್ಲಿ ಒಂದು ತೂಬು ಇದೆ. ಈ ತೂಬಿಗೆ ಅನುಗುಣವಾಗಿ ಏರಿಯ ಹೊರಭಾಗದಲ್ಲಿ ಕಾಲುವೆಗೆ ಹೊಂದಿಕೊಂಡಂತೆ ತೊಟ್ಟಿಯನ್ನು ಕಟ್ಟಲಾಗಿದೆ. ಇದರ ಮೂಲಕ ವಿವಿಧ ದಿಕ್ಕುಗಳ ಆಯಕಟ್ಟು ಪ್ರದೇಶಗಳಿಗೆ ನೀರನ್ನು ಒದಗಿಸಲು ಸಹಾಯಕವಾಗುತ್ತದೆ. ಇಂತಹ ವ್ಯವಸ್ಥೆ ಇಂದಿಗೂ ಅಸ್ತಿತ್ವದಲ್ಲಿದ್ದು, ಆಯಕಟ್ಟು ಪ್ರದೇಶಗಳಿಗೆ ನೀರನ್ನು ಪೂರೈಸುತ್ತಿವೆ. ಈ ಮೂಲಕ ವಿವಿಧ ಬೆಳೆಗಳನ್ನು ಬೆಳೆಯಲಾಗುತ್ತದೆ. ಮುಖ್ಯವಾಗಿ ಭತ್ತದ ಗದ್ದೆಯನ್ನು ಸರ್ವಕಾಲದಲ್ಲಿಯೂ ಸಮರ್ಪಕವಾಗಿ ಬೆಳೆಯುತ್ತಾರೆ. ಈ ಕೆರೆಯ ನೀರಾವರಿ ಇಲಾಖೆಯಿಂದ ರಕ್ಷಣೆಯನ್ನು ಪಡೆದಿದೆ.

## ಕಣತೂರು ಕೆರೆ

ಕಣತೂರು ಕೆರೆಯು ತುರುವೇಕೆರೆಯಿಂದ ೧೧ ಕಿ.ಮೀ. ಮತ್ತು ತಂಡಗದಿಂದ ೧ ಕಿ.ಮೀ. ದೂರದಲ್ಲಿದೆ. ಹಿಂದಿನಿಂದಲೂ ಈ ಗ್ರಾಮದಲ್ಲಿ ಕಣತೂರು ಎಂಬ ಹೆಸರಿನ ಆಶ್ರಮ ಇದೆ. ಇದರಿಂದ ಗ್ರಾಮಕ್ಕೆ ಈ ಹೆಸರು ಬಂದಿದೆಂಬುದಾಗಿ ಊರಿನ ಜನಸಾಮಾನ್ಯರಿಂದ ತಿಳಿದುಬಂದಿದೆ. ಗ್ರಾಮದ ಪೂರ್ವ ದಿಕ್ಕಿಗೆ ಕೆರೆ ಇದೆ. ಕೆರೆಯ ಮುಂಭಾಗದಲ್ಲಿ ವೀರಗಲ್ಲುಗಳು

ದೊರಕಿವೆ. ಇವುಗಳಿಂದ ಕೆರೆಗೆ ಸಂಬಂಧಪಟ್ಟ ಯಾವುದೇ ಮಾಹಿತಿಗಳು ತಿಳಿದುಬಂದಿಲ್ಲ. ಕೆರೆಯು ೧೩೩.೭೩ಯಷ್ಟು ನೀರು ಸಂಗ್ರಹಣ ಸಾಮರ್ಥ್ಯವನ್ನು ಹೊಂದಿದೆ. ೩೫.೯೧ ಹೆಕ್ಟೇರ್‌ಗಳಷ್ಟು ಜಲ ವಿಸ್ತೀರ್ಣವನ್ನು ಹೊಂದಿದ್ದು, ೧೬೩ ಹೆಕ್ಟೇರ್‌ಗಳಿಗಿಂತ ಹೆಚ್ಚು ಆಯಕಟ್ಟು ಪ್ರದೇಶಕ್ಕೆ ನೀರನ್ನು ಪೂರೈಸುತ್ತಿತ್ತು. ಕೆರೆಯ ಏರಿಯು ಪೂರ್ವ ಪಶ್ಚಿಮಾಭಿಮುಖವಾಗಿದ್ದು, ಕೆರೆಯಿಂದ ಉತ್ತರ ದಿಕ್ಕಿಗೆ ಇದೆ. ಏರಿಯ ಉದ್ದ ೧ ಕಿ.ಮೀ. ಮತ್ತು ಅಗಲ ೨ ಮೀ. ಇದೆ. ಏರಿಯ ಪಕ್ಕದಲ್ಲಿ ಎರಡು ಹಾಳು ಮಂಟಪಗಳು ಮತ್ತು ಒಂದು ಪುಷ್ಕರಣಿ ಕಂಡುಬಂದಿದೆ. ಈ ಕೆರೆಯು ಹಿಂದಿನಿಂದಲೂ ಮಳೆಯ ನೀರನ್ನು ಅವಲಂಬಿಸಿತ್ತು. ಪ್ರಸ್ತುತ ದಿನಗಳಲ್ಲಿ ಹೇಮಾವತಿ ನಾಲೆಯ ನೀರು ಕೆರೆಯ ಪಕ್ಕದ ಚಾನೆಲ್‌ಗಳ ಮೂಲಕ ಹರಿದುಹೋಗುತ್ತದೆ. ಜನ ಸಾಮಾನ್ಯರು ಈ ನೀರನ್ನು ಆಯಕಟ್ಟು ಪ್ರದೇಶಗಳಿಗೆ ಹಾಯಿಸಿ ಅಧಿಕವಾದ ಕೃಷಿಯನ್ನು ಬೆಳೆಯುತ್ತಾರೆ. ಮುಖ್ಯವಾಗಿ ಭತ್ತದ ಗದ್ದೆ, ತೆಂಗು ಮತ್ತು ಅಡಿಕೆ ಇದ್ದವು.

ಇಂದು ಈ ರೀತಿಯ ನೀರಾವರಿ ವ್ಯವಸ್ಥೆಯಿಂದ ಕೆರೆಯು ಬಳಕೆಯಾಗದೆ ಹೂಳು ತುಂಬಿಕೊಂಡಿದೆ. ಮುಂದಿನ ಪೀಳಿಗೆಗೆ ಕೆರೆಯೇ ಇಲ್ಲದಂತೆ ಆಗುತ್ತಿದೆ. ಇದಕ್ಕಾಗಿ ಕೆರೆಯ ಉಸ್ತುವಾರಿಗೆ ಸಂಬಂಧಿಸಿದ ಇಲಾಖೆಯವು ಅಥವಾ ತಾಲೂಕು ಮತ್ತು ಗ್ರಾಮಪಂಚಾಯತ್ ಇತ್ತ ಗಮನ ಹರಿಸಬೇಕು. ಈ ಇಲಾಖೆಯ ಕೆರೆಯಲ್ಲಿ ಹೂಳೆತ್ತೆಸಿ, ಕೆರೆಗೆ ಹೇಮಾವತಿ ನಾಲೆಯ ನೀರನ್ನು ಹರಿಸಬೇಕು. ಇದರಿಂದ ಅಧಿಕವಾಗುತ್ತಿರುವ ಆಯಕಟ್ಟು ಪ್ರದೇಶಗಳಿಗೆ ನೀರನ್ನು ಸಮರ್ಪಕವಾಗಿ ಪೂರೈಸಲು ಸಹಾಯಕವಾಗುತ್ತದೆ ಎನ್ನಬಹುದು.

### ನೀರಗುಂದ ಕೆರೆ

ನೀರಗುಂದ ಕೆರೆಯು ಬಾಣಸಂದ್ರದಿಂದ ತುರುವೇಕೆರೆಗೆ ಹೋಗುವ ಮಾರ್ಗಮಧ್ಯದಲ್ಲಿ ಬರುತ್ತದೆ. ತುರುವೇಕೆರೆಯಿಂದ ೮ ಕಿ.ಮೀ. ದೂರದಲ್ಲಿರುವ ಇಲ್ಲಿನ ಕಂಚೀರಾಯ ಬೆಟ್ಟ ಮತ್ತು ಜಲಾನಯನ ಪ್ರದೇಶ ಸೇರಿ ನೀರಗುಂದ ಎಂಬ ಹೆಸರು ಬಂದಿದೆ ಎನ್ನಬಹುದು. ಈ ಗ್ರಾಮದ ಪೂರ್ವ ದಿಕ್ಕಿಗೆ ಕೆರೆ ಇದೆ. ಕೆರೆಯ ಪಕ್ಕದಲ್ಲಿ ಕಾಲಭೈರವೇಶ್ವರ ಮತ್ತು ರುದ್ರೇಶ್ವರ ದೇವಸ್ಥಾನಗಳಿವೆ. ಈ ದೇವಸ್ಥಾನದ ಹತ್ತಿರ ಹೊಯ್ಸಳ ಕಾಲದ ಒಂದು ಶಾಸನ ಕಲ್ಲು ಇದೆ. ಇದರಲ್ಲಿ ಕರೆಗೆ ಸಂಬಂಧಪಟ್ಟಂತೆ ಮಾಹಿತಿಗಳು ತಿಳಿದುಬಂದಿಲ್ಲ. ಸ್ಥಳೀಯರ ಹೇಳಿಕೆ ಪ್ರಕಾರ ಹೊಯ್ಸಳ ವೀರಬಲ್ಲಾಳನ ಆಳ್ವಿಕೆ ಅವಧಿಯಲ್ಲಿ ಮಲ್ಲನಗೌಡ ಎಂಬುವವನು ನೀರಗುಂದ ಸೇರಿದಂತೆ ಸುತ್ತಮುತ್ತಲಿನ ಗ್ರಾಮಗಳಿಗೆ ಮಾಂಡಲೀಕನಾಗಿರುವುದರ ಬಗ್ಗೆ ತಿಳಿಸುತ್ತಾರೆ. ಮಲ್ಲನಗೌಡನ ಬಗ್ಗೆ ಇಲ್ಲಿ ದೊರೆತ ಶಾಸನಗಳಲ್ಲಿಯೂ ಕೂಡ ಉಲ್ಲೇಖವಾಗಿದೆ. ಇಲ್ಲಿನ ಕೆರೆಯನ್ನು ಯಾರು ನಿರ್ಮಿಸಿದರು ಎಂಬುದರ ಬಗ್ಗೆ ತಿಳಿದುಬಂದಿದಲ್ಲ. ಇದರಿಂದ ಕ್ಷೇತ್ರಕಾರ್ಯದಿಂದ ಕಂಡುಕೊಂಡ ವಿಷಯವನ್ನು ಇಲ್ಲಿ ಪ್ರಸ್ತಾಪಿಸಿದ್ದೇನೆ.

ಕೆರೆಯು ೧೨.೦೦ ಹೆಕ್ಟೇರ್ ಜಲ ವಿಸ್ತೀರ್ಣ ಮತ್ತು ೫.೧೭ ಹೆಕ್ಟೇರ್‌ಗಳಿದ್ದು ಆಯಕಟ್ಟು ಪ್ರದೇಶವನ್ನು ಹೊಂದಿದೆ. ಕೆರೆಯ ಏರಿಯು ಉತ್ತರ, ದಕ್ಷಿಣಾಭಿಮುಖವಾಗಿದ್ದು, ಕೊನೆಯ ಭಾಗವು ಪೂರ್ವ ದಿಕ್ಕಿಗೆ ಮುಂದುವರೆದಿದೆ. ಕೆರೆಯಲ್ಲಿ ಮರದ ತುಂಡಿನ ಒಂದು ತೂಬನ್ನು ಏರಿಗೆ ಅಳವಡಿಸಲಾಗಿದೆ. ಏರಿಯಿಂದ ಒಂದು ಕಾಲುವೆಯ ಹೊರಬಂದಿದ್ದು, ಆಯಕಟ್ಟು ಪ್ರದೇಶಕ್ಕೆ ನೀರನ್ನು ಹಾಯಿಸಿ ವಿವಿಧ ಬೆಳೆಗಳನ್ನು ಬೆಳೆಯುತ್ತಾರೆ. ಮುಖ್ಯವಾಗಿ ಭತ್ತ, ರಾಗಿ, ತೆಂಗು ಇದ್ದವು. ಕೆರೆಯ ಪಕ್ಕದಲ್ಲಿ ಒಂದು ಮಂಟಪ ಮತ್ತು ಪುಷ್ಕರಣಿ ಇದೆ. ಪ್ರಸ್ತುತ ದಿನಗಳಲ್ಲಿಯೂ ಈ ಪುಷ್ಕರಣಿಯ ನೀರು ಬಳಕೆಯಾಗುತ್ತಿದೆ. ಈ ಕೆರೆಯು ನೀರಾವರಿ ಇಲಾಖೆಯಿಂದ ರಕ್ಷಣೆಯನ್ನು ಪಡೆದಿದೆ. ಆದರೆ ಗ್ರಾಮದ ಜನರು ಕೆರೆಯ ವಿಸ್ತೀರ್ಣದಲ್ಲಿ ತಿಪ್ಪೆಗೊಬ್ಬರವನ್ನು ಹಾಕಿ ಕೆರೆಯ ನೈರ್ಮಲ್ಯವನ್ನು ಹಾಳುಮಾಡುತ್ತಿದ್ದಾರೆ. ಊರಿನ ಗ್ರಾಮಸ್ಥರು ಇತ್ತಕಡೆ ಗಮನ ಹರಿಸಿದರೆ ಗ್ರಾಮದ ಮತ್ತು ಕೆರೆಯ ಸೌಂದರ್ಯವನ್ನು ಹೆಚ್ಚಿಸಬಹುದು. ಗ್ರಾಮದಲ್ಲಿ ಯಾವುದೇ ರೋಗಗಳು ಹರಡದಂತೆ ತಡೆಯಬಹುದು ಎಂಬುದು ನನ್ನ ಅನಿಸಿಕೆಯಾಗಿದೆ. ಕೆರೆಯ ರಚನೆ ಮತ್ತು ವಿನ್ಯಾಸವನ್ನು ಗಮನಿಸಿದಾಗ ಹೊಯ್ಸಳ ಕಾಲದಲ್ಲಿ ನಿರ್ಮಿಸಿದಂತೆ ಕಂಡುಬಂದಿದೆ.

ಈ ಮೇಲಿನ ಕೆರೆಗಳು ತುರುವೇಕೆರೆ ತಾಲೂಕಿನ ಪ್ರಮುಖ ಕೆರೆಗಳಾಗಿದ್ದು, ಇವುಗಳ ಬಳಕೆಯಿಂದ ಯಾವ ಯಾವ ಬೆಳೆಗಳನ್ನು ಬೆಳೆಯುತ್ತಾರೆ ಎಂಬುದರ ವಿವರಣೆಯನ್ನು ಮುಂದಿನ ಅಧ್ಯಾಯದಲ್ಲಿ ನೀಡಲಾಗಿದೆ.

**ಅಡಿ ಟಿಪ್ಪಣಿಗಳು**

೧. ಕೊಟ್ರಯ್ಯ ಸಿ.ಟಿ.ಎಂ. (ಆಂಗ್ಲ ಮೂಲ), ಧ್ರುವ ನಾರಾಯಣ (ಕನ್ನಡ ಅನುವಾದ), ೨೦೦೧; ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ, ಪು.೭೧.

೨. Buchanan Francis, 1807; Journey from Madras through countries of Mysore, canara and Malabar, page 85.

೩. EC XII, 1904; Turvekere No. 2, P.119, Tumkur.

೪. ಕೊಟ್ರಯ್ಯ ಸಿ.ಟಿ.ಎಂ. (ಆಂಗ್ಲ ಮೂಲ), ಧ್ರುವ ನಾರಾಯಣ (ಕನ್ನಡ ಅನುವಾದ), ಪೂರ್ವೋಕ್ತ, ಪು. ೧೧೯.

೫. ದೇವರಕೊಂಡಾರೆಡ್ಡಿ (ಸಂ.), ೨೦೦೬; ಹಂಪಿ ಸಂಪುಟ, ಪು.೪೭೦.

೬. ಅದೇ.

೭. ದೀಕ್ಷಿತ್ ಜಿ.ಎಸ್. ಮತ್ತು ಇತರರು, ೨೦೦೦; ಕರ್ನಾಟಕದ ಕೆರೆ ನೀರಾವರಿ, ಪುಟ.೧೦೮.

೮. ರಾಜಾರಾಮ್ ಹೆಗಡೆ (ಸಂ.), ೨೦೦೨; ಕೆರೆ ನೀರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ, ಪುಟ. ೩೭

೯. ಅದೇ.

೧೦. EC XII, 1904; Turvekere No. 2, P.119, Tumkur.

೧೧. ಗೋಪಾಲ್ ಆರ್. (ಸಂ.), ೨೦೦೯; ತುಮಕೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು-೫೦೦.

೧೨. EC XII, 1904; Turvekere No. 2, P.119, Tumkur. ತುಮಕೂರು ಜಿಲ್ಲಾ ಗ್ಯಾಜೆಟಿಯರ್, ಪು.೩

೧೩. ಗೋಪಾಲ್ ಆರ್. (ಸಂ.), ಪೂರ್ವೋಕ್ತ, ಪು.೨೫೦.

೧೪. ಅದೇ.

೧೫. EC XII, ಮಲ್ಲಾಘಟ್ಟ, ನಂ.೨, ಪು.೧೧೮, ತುರುವೇಕೆರೆ (ತಾ), ತುಮಕೂರು (ಜಿ)

೧೬. ಕನ್ನಡ ವಿಷಯ ವಿಶ್ವಕೋಶ ಸಂ.೨, ೨೦೦೭; ಪು.೧೨೯.

೧೭. EC XVI, (Suplimontary) ಸಂಪಿಗೆ ನಂ.೩೧, ಪು.೭೦, ತುರುವೇಕೆರೆ (ತಾ)

೧೮. EC XII, ಜಡಿಯ ನಂ.೨೮, ಪು. ೧೩೧, ತುರುವೇಕೆರೆ (ತಾ) ತುಮಕೂರು (ಜಿ)

೧೯. EC XII, ತಂಡಗ ನಂ.೩೦, ಪು.೧೩೩, ತುರುವೇಕೆರೆ (ತಾ) ತುಮಕೂರು (ಜಿ)

೨೦. EC XVI, (Suplimontary) ಕೊಂಡಜ್ಜಿ, ನಂ.೭೬, ಪು.೪೧, ತುರುವೇಕೆರೆ (ತಾ) ತುಮಕೂರು (ಜಿ)

೨೧. EC XII, ಸೂಳೆಕೆರೆ, ನಂ.೧೫೯, ಪು.೭೩, ತುರುವೇಕೆರೆ (ತಾ) ತುಮಕೂರು (ಜಿ)

೨೨. ಅಭಿಶಂಕರ್, ೧೯೬೯; ತುಮಕೂರು ಜಿಲ್ಲಾ ದರ್ಶನ, ಪು.-೧೯೨.

## ಅಧ್ಯಾಯ ೪

# ಕೆರೆ ಆಧಾರಿತ ಕೃಷಿ

ಕೃಷಿ ಪ್ರಧಾನವಾದ ತುರುವೇಕೆರೆ ತಾಲೂಕಿನ ಭೌಗೋಳಿಕ ವಿಸ್ತೀರ್ಣ ೭,೫೯೬೧ ಹೆಕ್ಟೇರ್. ಇದರಲ್ಲಿ ೪೦,೦೫೦ ಹೆಕ್ಟೇರ್ ಸಾಗುವಳಿಗೆ ಯೋಗ್ಯವಾಗಿರುತ್ತದೆ. ೨೭,೩೫೭ ಹೆಕ್ಟೇರ್ ಆಹಾರ ಧಾನ್ಯಗಳು, ೫,೨೧೫ ಹೆಕ್ಟೇರ್ ದ್ವಿದಳ ಧಾನ್ಯಗಳು ಮತ್ತು ೧,೦೬೬ ಹೆಕ್ಟೇರ್ ತೋಟದ ಬೆಳೆಗಳಿರುತ್ತವೆ.[೧] ಹಾಗೂ ೨೬ ಗ್ರಾಮ ಪಂಚಾಯಿತಿಗಳಿದ್ದು, ಇದರಲ್ಲಿ ಇಬ್ಬರು ಕೃಷಿ ಸಹಾಯಕರು ಮತ್ತು ಎಂಟು ಸಹಾಯಕ ಕೃಷಿ ಅಧಿಕಾರಿಗಳು ಹಾಗೂ ಒಬ್ಬ ಕೃಷಿ ಅಧಿಕಾರಿಗಳು ಕಾರ್ಯನಿರ್ವಹಿಸುತ್ತಿದ್ದಾರೆ. ಪ್ರತಿ ಹೋಬಳಿಯಲ್ಲಿ ರೈತ ಸಂಪರ್ಕ ಕೇಂದ್ರಗಳಿದ್ದು, ಒಬ್ಬ ಕೃಷಿ ಅಧಿಕಾರಿ ವಹಿವಾಟು ನೋಡಿಕೊಳ್ಳುತ್ತಿದ್ದಾರೆ. ತಾಲೂಕಿನಲ್ಲಿ ೨೫,೦೭೯ ಕೃಷಿ ಕುಟುಂಬಗಳಿವೆ. ಇದರಲ್ಲಿ ೫,೫೫೮ ದೊಡ್ಡ ರೈತ, ೧೯,೪೭೦ ಸಣ್ಣ ಮತ್ತು ಅತಿಸಣ್ಣ ರೈತ ಕುಟುಂಬಗಳಿವೆ.[೨] ಈ ಪ್ರದೇಶವು ಇತಿಹಾಸ ಕಾಲದಿಂದಲೂ ಫಲವತ್ತತೆಗೆ ಹೆಸರಾದ ಭೂಪ್ರದೇಶವಾಗಿತ್ತು. ಇದಕ್ಕೆ ಕಾರಣ ಮಳೆ ನೀರನ್ನು ಸಂಗ್ರಹಿಸುತ್ತಿರುವ ಹಲವಾರು ಕೆರೆಗಳು ಮತ್ತು ಇತ್ತೀಚೆಗೆ ಕೆರೆಗಳಿಗೆ ನೀರನ್ನು ಹರಿಸುತ್ತಿರುವ ಹೇಮಾವತಿ ನಾಲೆ ಹಾಗೂ ಮಣ್ಣಿನ ಗುಣ ಪ್ರಮುಖವಾಗಿವೆ. ತಾಲೂಕಿನಲ್ಲಿ ಹೆಚ್ಚಿನ ಭೂಪ್ರದೇಶವು ಕೆಂಪು ಮರಳು ಮಿಶ್ರಿತ ಗೋಡು ಮತ್ತು ಕಂದು ಮಣ್ಣು ಕಂಡು ಬರುತ್ತದೆ. ತಾಲೂಕಿನ ಉತ್ತರ ಭಾಗದ ಅಲ್ಲಲ್ಲಿ ಗೋಡು ಮಣ್ಣು ಭೂಮಿ ಇದೆ. ಇದರಿಂದ ರಾಗಿ, ಭತ್ತ ತೊಗರಿ, ಹುರುಳಿ, ಅವರೆ, ಹುಚ್ಚೆಳ್ಳು ಮತ್ತು ಸಾಸಿವೆ ಮುಂತಾದ ಬೆಳೆಗಳಲ್ಲದೆ, ತೋಟದ ಬೆಳೆಗಳಾದ ತೆಂಗು ೨೩೮೮೭ ಹೆಕ್ಟೇರ್. ನಂತರ ಅಡಿಕೆ ೮೧೫ ಹೆಕ್ಟೇರ್ ಮತ್ತು ರೇಷ್ಮೆ ಬೆಳೆ ೧೩೫.೫೫ ಹೆಕ್ಟೇರ್ ಈ ಪ್ರದೇಶದಲ್ಲಿ ಬೆಳೆಯಲಾಗುತ್ತಿದೆ.[೩]

ಈ ಪರಿಸರದ ಕೃಷಿಕರು ಮಳೆಗಿಂತಲೂ ಹೆಚ್ಚಾಗಿ ನದಿ, ಸಾಲಾ, ಹಳ್ಳ, ಕೆರೆ -ಬಾವಿಗಳ ನೀರನ್ನೇ ಅವಲಂಬಿಸಿದ್ದರು. ಇಲ್ಲಿನ ಮಳೆ ಮತ್ತು ಭೌಗೋಳಿಕ ಅಂಶಗಳನ್ನು ಗಮನಿಸಿಕೊಂಡು ಕೃಷಿ ಬೆಳೆಗಳನ್ನು ಮೂರು ಹಂಗಾಮು (ಕಾಲ) ಗಳಲ್ಲಿ ಬೆಳೆಯಲಾಗುತ್ತದೆ. ಅವುಗಳೆಂದರೆ ೧. ಮುಂಗಾರು : ಏಪ್ರಿಲ್‌ನಿಂದ ಸೆಪ್ಟೆಂಟರ್; ೨. ಹಿಂಗಾರು : ಅಕ್ಟೋಬರ್‌ನಿಂದ ಡಿಸೆಂಬರ್ ಮತ್ತು ೩. ಬೇಸಿಗೆ; ಜನವರಿಯಿಂದ ಮಾರ್ಚ್‌ವರೆಗೆ. ಈ ಪ್ರದೇಶದಲ್ಲಿ ಹೇಮಾವತಿ ನಾಲೆಯ ನೀರು ಕೆರೆಗಳಿಗೆ ಹರಿದು ಬಂದು ೧,೧೭,೪೬೪ ಎಕರೆ ಭೂಮಿಗೆ ನೀರನ್ನು ಒದಗಿಸುತ್ತಿದೆ. ಕೆರೆಯ ನೀರಿನ ಬಳಕೆಯಿಂದ ಮೇಲಿನ ಮೂರು ಹಂಗಾಮಿ ಬೆಳೆಗಳನ್ನು ಬೆಳೆಯಲಾಗುತ್ತದೆ. ಅದನ್ನು ಕೆಳಗಿನಂತಿವೆ. ವಿವರಿಸಲಾಗಿದೆ.

### ನೀರಿನ ಬಳಕೆ ಮತ್ತು ಬೆಳೆಗಳು

ಪ್ರಸ್ತುತ ತಾಲೂಕಿನ ಈಗಿನ ಕೃಷಿ ವಿವರಗಳನ್ನು ತಿಳಿಯುವುದಕ್ಕಿಂತ ಮೊದಲು ಪ್ರಾಚೀನ ಕಾಲದ ಸ್ಥಿತಿಗತಿಗಳನ್ನು ಗಮನಿಸಬೇಕಾಗುತ್ತದೆ. ವಿಜಯನಗರ ಕಾಲಕ್ಕಿಂತ ಪೂರ್ವದಲ್ಲೇ ಈ ಪ್ರದೇಶದಲ್ಲಿ ಕೃಷಿ ನೀರಾವರಿಗಳು ವ್ಯವಸ್ಥಿತವಾಗಿದ್ದುದರ ಬಗೆಗೆ ಶಾಸನೋಕ್ತ ಉದಾಹರಣೆಗಳು ಸಿಗುತ್ತವೆ. ತಂಡಗ ಗ್ರಾಮದ ಕಲ್ಯಾಣಿ ಚಾಲುಕ್ಯರ ಕಾಲದ ಧಾರ್ಮಿಕ ಶಾಸನದಲ್ಲಿ[೪] (ಕ್ರಿ.ಶ. ೧೧೪೯) ಪೆರ್ಮಾಡಿದೇವನ ಮಾಚರಸನು ಮೂಲ ಅಮೃತರಾಶಿ ದೇವರಿಗೆ ಮೂರು ಖಂಡುಗ ಗದ್ದೆ ಬೆದ್ದಲು ಬಿಟ್ಟ ವಿವರವಿದೆ. ಅದೇ ರೀತಿ ಹೊಯ್ಸಳರ ಕಾಲದ ಧಾರ್ಮಿಕ ಶಾಸನದಲ್ಲಿ (ಕ್ರಿ.ಶ. ೧೨೩೮)[೫] ದಂಡಿಶಿವರ ಗ್ರಾಮದ ಬಲ್ಲೇಶ್ವರ ದೇವರ ಆಹಾರದಾನ, ಜೀರ್ಣೋದ್ಧಾರಕ್ಕೆ ಜಗದಾಳ ಬಲೆನಾಯಕ ಗದ್ದೆ ಮತ್ತು ಬೆದ್ದಲು ಭೂಮಿಯನ್ನು ದತ್ತಿ ಬಿಟ್ಟ ಉಲ್ಲೇಖವಿದೆ.

ಈ ತಾಲೂಕಿನಲ್ಲಿ ಭತ್ತದ ಗದ್ದೆ ಅಂದಿನಿಂದಲೂ ನೀರಾವರಿ ಬೆಳೆಯಾಗಿ ಬೆಳೆದು ಬಂದಿದೆ. ಇಂದು ಕೃಷಿಯಲ್ಲಿ ಸಾಕಷ್ಟು ಸುಧಾರಣೆಗಳಾಗಿದ್ದು, ಕೆರೆ ನೀರನ್ನು ಬಳಸಿಕೊಂಡು ಏಕದಳ ಧಾನ್ಯ, ದ್ವಿದಳಧಾನ್ಯ, ವಾಣಿಜ್ಯ ಬೆಳೆಗಳು ಮತ್ತು ತೋಟದ ಬೆಳೆಗಳು ಹಾಗೂ ತರಕಾರಿಗಳನ್ನು ಕೂಡ ಬೆಳೆಯುತ್ತಾರೆ. ಅವುಗಳ ವಿವರಗಳನ್ನು ಈ ರೀತಿಯಾಗಿ ತಿಳಿಯಬಹುದು.

### ಭತ್ತ

ತುರುವೇಕೆರೆ ಪರಿಸರಕ್ಕೆ ಸೇರಿದ ಗ್ರಾಮಗಳು ಭತ್ತದ ಕೃಷಿಗೆ ಹೆಸರುವಾಸಿಯಾಗಿವೆ. ಭತ್ತಕ್ಕೆ 'ಒರೈಸಾ ಸಟೈವ್' ಎಂಬ ವೈಜ್ಞಾನಿಕ ಹೆಸರು ಇದೆ. ಇದು ಹುಲ್ಲಿನ ವರ್ಗದ ಒಂದು ಸಸ್ಯ. ಈ ಪ್ರದೇಶದಲ್ಲಿ ಕೆರೆ ಮತ್ತು ನಾಲೆಗಳ ನೀರನ್ನು ಉಪಯೋಗಿಸಿಕೊಂಡು ಬೆಳೆದ ಬೆಳೆಯನ್ನು 'ತರಿ' ಎಂದು ಮಳೆಯನ್ನು ಆಶ್ರಯಿಸಿದ ಬೆಳೆಗಳನ್ನು 'ಖುಷ್ಕಿ' ಭೂಮಿ ಎಂದು

ಕರೆಯುತ್ತಾರೆ. ಭತ್ತದ ಬೆಳೆಯಲ್ಲಿ ಖುಷ್ಕಿ ಭೂಮಿಗಿಂತ ತರಿ ಭೂಮಿಯೇ ಹೆಚ್ಚಾಗಿ ಕಂಡುಬರುತ್ತದೆ. ೧೯೫೯-೬೦ರಲ್ಲಿ ೬,೪೦೦ ಎಕರೆಗಳಷ್ಟು[೬] ಭತ್ತದ ಬೆಳೆ ಇದ್ದರೆ, ೧೯೬೬-೬೭ರಲ್ಲಿ ೩,೫೫೭ ಎಕರೆ[೭] ಮುಂಗಾರು ಬೆಳೆ ಮತ್ತು ೧,೦೨೮ ಎಕರೆ ಭೂಮಿಯನ್ನು ಬೇಸಿಗೆ ಕಾಲದಲ್ಲಿ ಭತ್ತದ ಸಾಗುವಳಿಗೆ ಉಪಯೋಗಿಸಲಾಗುತ್ತದೆ. ಪ್ರಸ್ತುತ ೨೦೦೯-೧೦ರ ಅವಧಿಯ ತರಿ ಭೂಮಿಯಲ್ಲಿ ೧೯೩೦ ಎಕರೆ ಮುಂಗಾರು ಬೆಳೆ ಮತ್ತು ೧,೬೯೫ ಎಕರೆ[೮] ಬೇಸಿಗೆ ಬೆಳೆ ಬೆಳೆಯಲಾಗುತ್ತದೆ. ಅದೇರೀತಿ ಖುಷ್ಕಿ ಭೂಮಿಯಲ್ಲಿ ೨೭೯ ಎಕರೆ[೯] ಮುಂಗಾರು ಹಂಗಾಮಿ ಬೆಳೆ ಕಂಡು ಬಂದಿದೆ. ತಾಲೂಕಿನಲ್ಲಿ ವಿವಿಧ ಭತ್ತದ ತಳಿಗಳಾದ ಜಯ, ಪ್ರಕಾಶ, ಮಂಗಳ, ಐ.ಆರ್.೬೪ ಇವುಗಳನ್ನು ಮುಂಗಾರು ಬೆಳೆಗಳನ್ನಾಗಿ ಮತ್ತು S-೩೧೭, S-೬೬೧, S-೭೪೯, S-೧೯೨, Ch-೪೫, Ch-೧೦, Ch-೨ ಇವು ಬೇಸಿಗೆ ಬೆಳೆಗಳಾಗಿ ಬಳಕೆಯಲ್ಲಿವೆ.[೧೦] ಈ ರೀತಿಯ ಭತ್ತದ ತಳಿಗಳನ್ನು ಋತುಗಳ ಆಧಾರದ ಮೇಲೆ ವಿಂಗಡಿಸುತ್ತಾರೆ. ಭತ್ತದಲ್ಲಿರುವ ಗಂಜಿಯನ್ನು ಕೂಡ ಗಣನೆಗೆ ತೆಗೆದುಕೊಳ್ಳುತ್ತಾರೆ. ಅಲ್ಲದೆ ಮಧ್ಯಮ ಮತ್ತು ಉತ್ತಮ ಭತ್ತದ ತಳಿಯ ಆಕಾರ ಮತ್ತು ಎತ್ತರವನ್ನು ಪರಿಗಣಿಸುತ್ತಾರೆ ಹಾಗೂ ಭತ್ತದ ಬಣ್ಣವನ್ನು ಆಧರಿಸಿ ಕೆಲವು ತಳಿ ಮತ್ತು ಬಿಳಿ ಭತ್ತದ ತಳಿಯೆಂದು ವರ್ಗೀಕರಿಸುತ್ತಾರೆ

ಭತ್ತದ ಸಾಗುವಳಿಯನ್ನು ಮುಂಗಾರು ಋತು ಜೂನ್-ಜುಲೈ ತಿಂಗಳಲ್ಲಿ ಬಿತ್ತನೆ ಮಾಡಿ ಆಗಸ್ಟ್ ತಿಂಗಳಲ್ಲಿ ನಾಟಿ ಹಾಕಿ ನವೆಂಬರ್ ಅಥವಾ ಡಿಸೆಂಬರ್ ತಿಂಗಳಲ್ಲಿ ಕಟಾವು ಮಾಡಲಾಗುತ್ತದೆ. ಹಿಂಗಾರು ಅಥವಾ ಬೇಸಿಗೆ ಋತು ಜನವರಿ ತಿಂಗಳಲ್ಲಿ ಪ್ರಾರಂಭವಾಗಿ ಮೇ - ಜೂನ್ ತಿಂಗಳಲ್ಲಿ ಮುಕ್ತಾಯವಾಗುತ್ತದೆ. ವಾರ್ಷಿಕವಾಗಿ ಎರಡು ಬಾರಿ ನೀರಾವರಿ ಬೆಳೆಯಾಗಿ ಭತ್ತವನ್ನು ಬೆಳೆಯುತ್ತಾರೆ. ಈ ಪ್ರದೇಶದಲ್ಲಿ ಭತ್ತವನ್ನು ಬೆಳೆಯುವ ಸಾಮಾನ್ಯ ಪದ್ಧತಿಯೆಂದರೆ 'ನಾಟಿ ವಿಧಾನ'. ಈ ವಿಧಾನವು ಬಹುತೇಕ ನೀರಾವರಿ ಪ್ರದೇಶಗಳಲ್ಲಿ ಕಂಡು ಬರುವುದು. ಇದು ಆಧುನಿಕ ವಿಧಾನವಾಗಿದೆ. ಇದರಿಂದ ಹೆಕ್ಟೇರುವಾರು ಇಳುವರಿಯು ಹೆಚ್ಚಾಗುತ್ತದೆ. ಈ ವಿಧಾನದಲ್ಲಿ ಭತ್ತದ ಪೈರುಗಳನ್ನು ಮಡಿಗಳಲ್ಲಿ ಬೆಳೆಯುವರು. ಸುಮಾರು ೩-೪ ವಾರಗಳ ನಂತರ ಅವುಗಳನ್ನು ಕಿತ್ತು ಹದಗೊಳಿಸಿದ ಗದ್ದೆಗಳಲ್ಲಿ ನಾಟಿ ಮಾಡಲಾಗುವುದು. ನಾಟಿ ಮಾಡಿದ ನಂತರ ೨-೩ ಸೆಂ.ಮೀ. ಎತ್ತರದವರೆಗೆ ಪೈರಿನ ತಳದಲ್ಲಿ ನೀರು ನಿಲ್ಲುವಂತೆ ನೋಡಿಕೊಳ್ಳುವುದು. ಕಟಾವಿಗೆ ಬಂದಾಗ ನೀರನ್ನು ಬಸಿದು ಕೊಯ್ಲು ಮಾಡುತ್ತಾರೆ.

ಭತ್ತದ ಇಳುವರಿಯು ಅದರ ತಳಿ ಮತ್ತು ಯಾವ ಋತುಗಳಲ್ಲಿ ಬೆಳೆಯುತ್ತಾರೆ ಎಂಬುದನ್ನು ಅವಲಂಬಿಸಿರುತ್ತದೆ. ಒಂದು ಎಕರೆಗೆ ಹೆಚ್ಚೆಂದರೆ ೪೦ ಕ್ವಿಂಟಲ್ ಭತ್ತ ಬೆಳೆಯುತ್ತಾರೆ. ಆದರೆ ಸಾಮಾನ್ಯವಾಗಿ ೨೦ ರಿಂದ ೨೫ ಕ್ವಿಂಟಲ್‌ವರೆಗೆ ಉತ್ತಮ ಫಸಲು ಬರುತ್ತದೆ. ಕೆರೆಯ ನೀರಿನಿಂದ ನೀರಾವರಿಗೆ ಒಳಪಟ್ಟಿರುವ ಗದ್ದೆಯಲ್ಲಿ ಎಕರೆಗೆ ೧೫ ರಿಂದ ೨೦ ಕ್ವಿಂಟಲ್‌ವರೆಗೆ

ಇಳುವರಿ ನಿರೀಕ್ಷಣೆ ಮಾಡುತ್ತಾರೆ. ಈ ತಾಲೂಕಿನ ಸರಾಸರಿ ಇಳುವರಿ ೨೮ ರಿಂದ ೨೦ ಕ್ವಿಂಟಲ್‌ಗಳಷ್ಟು ಇದೆ. ಭತ್ತದ ಹುಲ್ಲು ಇಂದು ಜಾನುವಾರುಗಳಿಗೆ ಮೇವಾಗಿ ಬಳಕೆಯಾಗುತ್ತಿದೆ.

**ರಾಗಿ**

ತುರುವೇಕೆರೆ ತಾಲೂಕಿನ ನೀರಾವರಿ ಬೆಳೆಗಳಲ್ಲಿ ರಾಗಿಯು ಒಂದು. ಇದು ನೀರಾವರಿ ಬೆಳೆಗಿಂತ ಒಣ ಬೇಸಾಯಕ್ಕೆ ಅತಿ ಸೂಕ್ತವಾದ ಬೆಳೆ ಆಗಿದೆ. ಇದಕ್ಕೆ 'ಯೆಲಿಯುಸಿನ್ ಕೋರಾಕಾನ್'[೧೨] ಎಂಬ ವೈಜ್ಞಾನಿಕ ಹೆಸರು ಇದ್ದು, ಇದನ್ನು ೨೦ ರಿಂದ ೩೦° ಸೆಂ.ಮೀ ಉಷ್ಣಾಂಶ ಮತ್ತು ಸುಮಾರು ೨೫ ರಿಂದ ೩೦ ಇಂಚು ಮಳೆಯ ಪ್ರಮಾಣದಲ್ಲಿ ಬೆಳೆಯುತ್ತಾರೆ.[೧೩] ಈ ಪ್ರದೇಶದಲ್ಲಿ ವಾರ್ಷಿಕವಾಗಿ ಮುಂಗಾರು, ಹಿಂಗಾರು ಮತ್ತು ಬೇಸಿಗೆ ಹಂಗಾಮಿನ ಬೆಳೆಗಳಿವೆ. ರಾಗಿ ಬೆಳೆಯಲ್ಲಿ ತುಮಕೂರು ಜಿಲ್ಲೆಯು ಪ್ರಥಮ ಸ್ಥಾನವನ್ನು ಪಡೆದಿದೆ. ಈ ಜಿಲ್ಲೆಗೆ ಸೇರಿದ ತುರುವೇಕೆರೆ ಪರಿಸರದಲ್ಲಿ ೧೯೫೯-೬೦ರಲ್ಲಿ ೩೨,೦೨೫ ಎಕರೆಗಳಷ್ಟು ರಾಗಿ ಇದ್ದು, ೧೯೬೬-೬೭ರಲ್ಲಿ ೪೬,೧೮೧ ಎಕರೆ ಮುಂಗಾರು ಬೆಳೆ ಮತ್ತು ೮೫ ಎಕರೆ[೧೪] ಹಿಂಗಾರು ಬೆಳೆ ಕಂಡುಬಂದಿದೆ. ೨೦೦೯-೧೦ರ ಅವಧಿಯಲ್ಲಿ ೧೯,೭೮೮ ಎಕರೆ ಮುಂಗಾರು ಹಂಗಾಮಿನ ಖುಷ್ಕಿ ಬೆಳೆ ಇದ್ದು, ಬೇಸಿಗೆ ಹಂಗಾಮಿನಲ್ಲಿ ೧೨೯ ಎಕರೆ ನೀರಾವರಿ ಬೆಳೆ ಬೆಳೆಯುವ ಗುರಿ ಹೊಂದಿದ್ದು, ೪೦ ಎಕರೆಗಳಷ್ಟು ಪ್ರಗತಿ ಆಗಿದೆ.[೧೫] ಮಳೆ ಕಡಿಮೆ ಹಾಗೂ ಅನಿಶ್ಚಿತವಾದಾಗ ಒಂದು ಅಥವಾ ಎರಡು ಬಾರಿ ನೀರನ್ನು ರಾಗಿಗೆ ಹಾಯಿಸುವುದರಿಂದ ಉತ್ತಮ ಇಳುವರಿಯನ್ನು ಪಡೆಯಬಹುದು. ತಾಲೂಕಿನಲ್ಲಿ ರಾಗಿಯನ್ನು ಸಾಲು ಬಿಡುವುದು, ಎರಚುವಿಕೆ ಹಾಗೂ ನಾಟಿ ಮಾಡುವುದು. ಹೀಗೆ ಮೂರು ವಿಧಾನಗಳಿಂದ ಬೆಳೆಯುವರು. ಇಂಡಾಫ್-೫, ಇಂಡಾಫ್-೮, ಇಂಡಾಫ್–೯, ಹೆಚ್.ಆರ್. ೯೧೧ ಇವು ಈ ತಾಲೂಕಿನ ಪ್ರಮುಖ ತಳಿಗಳಾಗಿವೆ.[೧೬]

ಇಂದು ರಾಗಿಯ ಬೆಳೆಯುವ ಪ್ರದೇಶದ ವಿಸ್ತೀರ್ಣವು ಭತ್ತ ಪ್ರದೇಶದ ವಿಸ್ತೀರ್ಣಕ್ಕಿಂತ ಬಹಳ ಹೆಚ್ಚಾಗಿದೆ. ರಾಗಿಯ ಬೆಳೆಯು ನಾಲ್ಕು ತಿಂಗಳ ಕಾಲದಲ್ಲಿ ಕೊಯ್ಲಿಗೆ ಬರುವುದರಿಂದ ಇದು ಬಡವರ ಆಹಾರ ಧಾನ್ಯವಾಗಿ ಹೆಚ್ಚು ಬೆಲೆಯನ್ನು ಹೊಂದಿರುತ್ತದೆ. ಇದರ ಒಂದು ಜಾತಿಯನ್ನು ನೀರು ಹಾಯಿಸಿ ಗದ್ದೆಗಳಲ್ಲಿ ಬೆಳೆಯುತ್ತಾರೆ. ಸಸಿಗಳನ್ನು ಒಟ್ಟಲಿನಿಂದ ಕಿತ್ತು ನಾಟಿ ಹಾಕುವ ಪದ್ಧತಿಯು ಇತ್ತೀಚೆಗೆ ರೂಢಿಗೆ ಬಂದಿದೆ. ಈ ಪದ್ಧತಿಯಿಂದ ಫಸಲೂ ಹೆಚ್ಚಾಗಿ ಬರುತ್ತದೆ. ಸರ್ಕಾರಿ ಸಂಸ್ಥೆಯೊಂದರಿಂದ ಹೊಸ ಜಾತಿಯ "ಹಂಸ"[೧೭] ಎಂಬ ಬಿಳಿಯ ರಾಗಿಯು ಉತ್ಪನ್ನವಾಗಿ ರೈತರ ವ್ಯವಸಾಯಕ್ಕೆ ಸರಬರಾಜು ಆಗುತ್ತಿದೆ. ಈ ಪ್ರದೇಶದಲ್ಲಿ ರಾಗಿಯನ್ನು ಬೆಳೆಯಲು ಒಣ ಮತ್ತು ನೀರಾವರಿ ರಾಗಿ ಬೆಳೆ ಗದ್ದೆಯನ್ನು ಕಬ್ಬಿಣದ

ನೇಗಿಲಿನಿಂದ ೬ ಇಂಚಿನಷ್ಟು ಆಳವಾಗಿ ಮೂರು ಸಲ ಸಾಗುವಳಿ ಮಾಡುತ್ತಾರೆ. ನಂತರ ಹಲುಬಿಯನ್ನು ಉಪಯೋಗಿಸಿ ಭೂಮಿಯನ್ನು ಸಮಮಾಡಿ ಕೊಟ್ಟಿಗೆ ಗೊಬ್ಬರ ಮತ್ತು ರಾಸಾಯನಿಕ ಗೊಬ್ಬರವನ್ನು ನಾಟಿ ಮಾಡುವ ಮೊದಲು ಹಾಕುತ್ತಾರೆ. ನಾಟಿ ಮಾಡಿದ ೩೫ ರಿಂದ ೪೦ ದಿನಗಳ ನಂತರ ಮತ್ತೊಮ್ಮೆ ಹಾಕುತ್ತಾರೆ. ಈ ಗೊಬ್ಬರ ಮಣ್ಣಿನ ತೇವಾಂಶವನ್ನು ಅವಲಂಬಿಸಿರುತ್ತದೆ. ನೀರಾವರಿ ರಾಗಿ, ಬೆಳೆ ಬೆಳೆಯಲು ನಾಲ್ಕು ತಿಂಗಳಿಗೆ ಎರಡು ಬಾರಿ ನೀರನ್ನು ಪೂರೈಸುತ್ತಾರೆ.

**ಜೋಳ**

ತುರುವೇಕೆರೆ ತಾಲೂಕಿನಲ್ಲಿ ಜೋಳವನ್ನು ನೀರಾವರಿ ಮತ್ತು ಒಣ ಬೇಸಾಯ ಕಾಲದಲ್ಲಿ ಬೆಳೆಯುವ ಬೆಳೆಯಾಗಿದೆ. ಇದರ ವೈಜ್ಞಾನಿಕ ಹೆಸರು 'ಸೊರ್ಗಾಮ್ ವಲ್ಗರೆ' ಎಂದು.[೧೮] ಈ ಬೆಳೆಯು ಉಷ್ಣವಲಯದ ಬೆಳೆಯಾಗಿದ್ದು, ೨೭° ಸೆಂ.ಮೀ. ದಿಂದ ೩೨° ಸೆಂ.ಮೀವರೆಗೆ ಉಷ್ಣಾಂಶ ಮತ್ತು ೩೦ ರಿಂದ ೨೦೦ ಸೆಂ.ಮೀ.ಮಳೆ ಬೀಳುವ ಪ್ರದೇಶದಲ್ಲಿ ಬೆಳೆಯುತ್ತಾರೆ. ತಾಲೂಕಿನಲ್ಲಿ ೧೯೫೯-೬೦ರಲ್ಲಿ ೨೫೦೦ ಎಕರೆಯಷ್ಟು[೧೯] ಮುಂಗಾರು ಜೋಳ ಕಂಡು ಬಂದಿದೆ. ೨೦೦೯-೧೦ರ ಮುಂಗಾರು ಹಂಗಾಮಿನ ಖುಷ್ಕಿ ಭೂಮಿಯಲ್ಲಿ ೪೯ ಎಕರೆ ಸ್ಥಳೀಯ ಜೋಳ ಮತ್ತು ಹಿಂಗಾರು ಹಂಗಾಮಿನಲ್ಲಿ ೨೯೩ ಎಕರೆ ಹೈಬ್ರಿಡ್ ಜೋಳ ಬೆಳೆಯಲಾಗಿದೆ.[೨೦] ಅಲ್ಲದೆ ನೀರಾವರಿ ಅಥವಾ ತರಿ ಭೂಮಿಯಲ್ಲಿ ಹಿಂಗಾರು ಹಂಗಾಮಿನ ೨೨೦ ಎಕರೆ ಮುಸುಕಿನ ಜೋಳ (ಮೇವು) ಮತ್ತು ೧೩ ಎಕರೆ ಮುಸುಕಿನ ಜೋಳ (ಧಾನ್ಯ)ವನ್ನು ಸಾಗುವಳಿ ಮಾಡಲಾಗಿದೆ.[೨೧]

ಈ ತಾಲೂಕಿನಲ್ಲಿ ಮುಂಗಾರು ಬೆಳೆಯನ್ನು ಒಣ ಬೇಸಾಯ ಕಾಲದಲ್ಲಿ ಜೂನ್ ಅಥವಾ ಜುಲೈ ತಿಂಗಳಲ್ಲಿ ಬಿತ್ತನೆ ಮಾಡಿ ಅಕ್ಟೋಬರ್ ಅಥವಾ ನವೆಂಬರ್ ತಿಂಗಳಲ್ಲಿ ಕಟಾವು ಮಾಡಲಾಗುತ್ತದೆ. ಹಿಂಗಾರು ಬೆಳೆಯನ್ನು ತರಿ ಭೂಮಿಯಲ್ಲಿ ಸೆಪ್ಟೆಂಬರ್ ಅಥವಾ ಅಕ್ಟೋಬರ್ ತಿಂಗಳಲ್ಲಿ ಆರಂಭಿಸಿ ಫೆಬ್ರವರಿ ಅಥವಾ ಮಾರ್ಚ್ ತಿಂಗಳಲ್ಲಿ ಮುಕ್ತಾಯವಾಗುತ್ತದೆ. ಈ ರೀತಿಯ ನೀರಾವರಿ ಭೂಮಿಯಲ್ಲಿ ಬೆಳೆದ ಜೋಳಕ್ಕೆ ಒಂದು ಬಾರಿ ನೀರನ್ನು ಪೂರೈಸುತ್ತಾರೆ. ಈ ಬೆಳೆಯನ್ನು ಹೆಚ್ಚಾಗಿ ದನಗಳಿಗೆ ಮೇವಾಗಿ ಬಳಸುತ್ತಾರೆ. ಕೆಲವು ಸಂದರ್ಭದಲ್ಲಿ ಧಾನ್ಯಗಳನ್ನು ಬೆಳೆಯುತ್ತಾರೆ.

ಜೋಳ ಬಿತ್ತನೆ ಮಾಡುವ ಸಾಂಪ್ರದಾಯಿಕ ಪದ್ಧತಿ ಪ್ರಕಾರ ಒಂದು ಅಥವಾ ಎರಡು ಸಲ ಹೆಗ್ಗುಂಟೆಯಿಂದ ಸಾಗುವಳಿ ಮಾಡುತ್ತಾರೆ. ಬಿತ್ತನೆಯನ್ನು ಕೂರಿಗೆಯಿಂದ ಮಾಡುತ್ತಾರೆ. ಒಂದು ಬೀಜದಿಂದ ಮತ್ತೊಂದು ಬೀಜದ ಅಂತರ ೯ ಇಂಚು, ಇರುವಂತೆ ೧ ಎಕರೆಗೆ

೪ ರಿಂದ ೫ ಕೆ.ಜಿ.ಯಷ್ಟು ಜೋಳದ ಬೀಜವನ್ನು ಬಿತ್ತಿ ಸಾಗುವಳಿ ಮಾಡುತ್ತಾರೆ. ತುರುವೇಕೆರೆ ಪರಿಸರದಲ್ಲಿ ಹೈಬ್ರಿಡ್ ಜೋಳಕ್ಕಿಂತ ಹೆಚ್ಚಾಗಿ ಸ್ಥಳೀಯ ಜೋಳ ಮತ್ತು ಜಾನುವಾರುಗಳಿಗಾಗಿ ಬೆಳೆಯುವ ಮುಸುಕಿನ ಜೋಳ ಕಂಡುಬರುತ್ತದೆ.

### ಅಲಸಂದೆ

ಅಲಸಂದೆಯು ಈ ಪ್ರದೇಶದ ನೀರಾವರಿ ಭೂಮಿಯಲ್ಲಿ ಬೆಳೆಯುವ ದ್ವಿದಳ ಧಾನ್ಯದಲ್ಲಿ ಒಂದು. ಈ ಬೆಳೆಯು ೨೦೦೯-೧೦ರ ಹಿಂಗಾರು ಹಂಗಾಮಿನಲ್ಲಿ ೪೦ ಎಕರೆ ಇದ್ದರೆ, ಬೇಸಿಗೆ ಹಂಗಾಮಿನಲ್ಲಿ ೧೪ ಎಕರೆಯಷ್ಟು ಗುರಿ ಹೊಂದಿದ್ದು, ೨೯ ಎಕರೆ 'ತರಿ' ಭೂಮಿಯಲ್ಲಿ ಸಾಗುವಳಿ ಮಾಡಲಾಗಿದೆ.[೨೨] ಈ ಬೆಳೆಯನ್ನು ಬೆಳೆಯುವ ಮೊದಲು ನೀರಾವರಿ ಭೂಮಿಯನ್ನು ಎರಡು ಬಾರಿ ಉಳುಮೆ ಮಾಡಿ ನಂತರ ಬೀಜವನ್ನು ಬಿತ್ತಿ ಎರಡು ಅಥವಾ ಮೂರು ಸರಿ ನೀರನ್ನು ಹಾಯಿಸಿ ಅಲಸಂದೆ ಬೆಳೆಯನ್ನು ಉತ್ಪಾದನೆ ಮಾಡುತ್ತಾರೆ. ವಾರ್ಷಿಕವಾಗಿ ಈ ಪರಿಸರದಲ್ಲಿ ಎರಡು ಬೆಳೆ ಬೆಳೆಯುತ್ತಾರೆ.

### ನೆಲಗಡಲೆ

ತುರುವೇಕೆರೆ ಪರಿಸರದ ಎಣ್ಣೆಕಾಳು ಬೀಜಗಳಲ್ಲಿ ನೆಲಗಡಲೆ ಒಂದು. ಇದನ್ನು 'ಅರಚಿಸ್ ಹೈಪೋಗಾಯಿ'[೨೩] ಎಂಬ ವೈಜ್ಞಾನಿಕ ಹೆಸರಿನಿಂದ ಕರೆಯುತ್ತಾರೆ. ಈ ಬೆಳೆಯು ತುಮಕೂರು ಜಿಲ್ಲೆಯಲ್ಲಿ ಒಣ ಬೇಸಾಯ ಬೆಳೆಯಾಗಿದ್ದರೆ, ಆ ಜಿಲ್ಲೆಯ ಒಂದು ತಾಲೂಕಾದ ತುರುವೇಕೆರೆಯಲ್ಲಿ ಒಣ ಮತ್ತು ನೀರಾವರಿ ಬೆಳೆಯಲಾಗಿದೆ. ೧೯೫೯-೬೦ರಲ್ಲಿ ೮೫೩ ಎಕರೆಗಳಲ್ಲಿ ಕಡಲೆಕಾಯಿ ಬೆಳೆಯುವ ಪ್ರದೇಶ ಇದ್ದು, ೧೯೬೬-೬೭ರಲ್ಲಿ ೩೦೮ ಎಕರೆಗಳಷ್ಟು[೨೪] ಇದೆ. ಪ್ರಸ್ತುತ ೨೦೦೯-೧೦ ರ ಅವಧಿಯ ಮುಂಗಾರು ಹಂಗಾಮಿನ ಖುಷ್ಕಿ ಭೂಮಿಯಲ್ಲಿ ೩ ಎಕರೆ ನೆಲಗಡಲೆ ಬೆಳೆಯಲಾಗಿದ್ದು ಮತ್ತು ಬೇಸಿಗೆ ಹಂಗಾಮಿನಲ್ಲಿ ೧೧ ಎಕರೆಯಷ್ಟು ತರಿ ಭೂಮಿಯಲ್ಲಿ ಸಾಗುವಳಿ ಮಾಡಲಾಗಿದೆ.[೨೫] ನೆಲಗೆಡಲೆ ಬೆಳೆಯಲು ಶ್ರೇಷ್ಠ ವರ್ಗದ ಮಣ್ಣಿನಲ್ಲಿ ಅಂದರೆ ಕೆಂಪು ಮತ್ತು ಬೂದು ಬಣ್ಣದ ಜೇಡಿಮಣ್ಣಿಗೆ ಆದ್ಯತೆ ನೀಡುತ್ತಾರೆ. ಏಕೆಂದರೆ ಇಂತಹ ಮಣ್ಣಿನಲ್ಲಿ ಕಡಲೆಕಾಯಿಯ ಬೆಳವಣಿಗೆ ವೇಗವಾಗಿರುತ್ತದೆ. ಈ ಬೆಳೆಯನ್ನು ಮೇ, ಜೂನ್ ಅಥವಾ ಜುಲೈ ತಿಂಗಳಲ್ಲಿ ಬಿತ್ತಿದರೆ ಸೆಪ್ಟೆಂಬರ್, ಅಕ್ಟೋಬರ್ ಮತ್ತು ನವೆಂಬರ್ ತಿಂಗಳಲ್ಲಿ ರಾಶಿ ಮಾಡುತ್ತಾರೆ. ಕಡಲೆಕಾಯಿ ಬೆಳೆಯ ಇಳುವರಿ ಪ್ರಮಾಣ ೧ ಎಕರೆಗೆ ೫೦೦ ಕೆ.ಜಿ.ಯಿಂದ ೬೦೦ ಕೆ.ಜಿ.ಯವರೆಗೆ ಇರುತ್ತದೆ. ಆದರೆ ನೀರಾವರಿ ಆಶ್ರಯದಲ್ಲಿ ಇಳುವರಿ ಪ್ರಮಾಣ ೧ ಎಕರೆಗೆ ೮೦೦ ಕೆ.ಜಿ.ಯಿಂದ ೧೦೦೦ ಕೆ.ಜಿ.ವರೆಗೆ ಬರುತ್ತದೆ. ತಾಲೂಕಿನ ಸುಧಾರಿತ ತಳಿಗಳೆಂದರೆ HG-೭, ಮಳೆಯಾಶ್ರಿತ ಪ್ರದೇಶಕ್ಕೆ ಮತ್ತು TMV-೨ ಮತ್ತು ಸ್ಪಾನಿಷ್

ಸುಧಾರಿತ ತಳಿಗಳು ನೀರಾವರಿ ಪ್ರದೇಶಕ್ಕೆ ಬಳಕೆಯಾಗುತ್ತವೆ.[೨೬] ಈ ಎಲ್ಲ ತಳಿಗಳ ಕಾಲಾವಧಿ ೧೦೦ ರಿಂದ ೧೪೦ ದಿನಗಳು. ಈ ಬೆಳೆಯ ತಯಾರಿ ಹಂತದಲ್ಲಿ ಕಬ್ಬಿಣ ಕುಂಟಿಯಿಂದ ೬ ಇಂಚು ಆದವರೆಗೆ ೩ ರಿಂದ ೪ ಸಲ ನೇಗಿಲ ಹೊಡೆಯುತ್ತಾರೆ. ಕಲ್ಟಿವೇಟರಿನಿಂದ ಭೂಮಿಯನ್ನು ಸಮ ಮಾಡುತ್ತಾರೆ. ಬಿತ್ತನೆಗಿಂತ ಪೂರ್ವದಲ್ಲಿ ೧ ಎಕರೆಗೆ ೮ ರಿಂದ ೧೦ ಚಕ್ಕಡಿಯಷ್ಟು ತಿಪ್ಪೆಗೊಬ್ಬರ ಬಳಸುತ್ತಾರೆ. ನೀರಾವರಿ ಜಮೀನಿಗೆ ೧ ಎಕರೆಗೆ ೧೦ ರಿಂದ ೧೫ ಚಕ್ಕಡಿಯಷ್ಟು ತಿಪ್ಪೆಗೊಬ್ಬರ ಹಾಗೂ ಆಧುನಿಕ ರಸಗೊಬ್ಬರ ಹಾಕುತ್ತಾರೆ. ೧ ಎಕರೆಗೆ ೨೫ ಕಿ.ಜಿ. ಅಮೋನಿಯಂ ಸಲ್ಫೇಟ್, ೬೫ ಕೆ.ಜಿ. ಸುಪರ್‌ಫಾಸ್ಪೇಟ್ ಮತ್ತು ೧೦ ಕೆ.ಜಿ. ಪೋಟ್ಯಾಸಿಯಂ ಬಳಸುತ್ತಾರೆ. ನೀರಾವರಿ ಬೆಳೆಗೆ ಸುಪರ್‌ಫಾಸ್ಪೇಟ್ ಗೊಬ್ಬರವನ್ನು ಹೆಚ್ಚು ಬಳಸುತ್ತಾರೆ. ೧ ಎಕರೆಗೆ ೨೫ ರಿಂದ ೩೫ ಕೆ.ಜಿ. ಬೀಜ ಹಾಕಿ ಕಡಲೆಕಾಯಿ ಹೂವು ಬಿಡುವ ಹಂತದವರೆಗೆ ೪ ಸಲ ಎಡೆಕುಂಟೆ ಹೊಡೆಯುತ್ತಾರೆ. ೩೧/೨ ತಿಂಗಳಿಂದ ೫೧/೨ ತಿಂಗಳಿಗೆ ಕಡಲೆಕಾಯಿ ಎಲೆ ಹಳದಿ ವರ್ಣವಾಗಿ ಒಣಗ ತೊಡಗುತ್ತದೆ.

ನೀರಾವರಿ ತಳಿಗಳಿಗೆ ೧೦ ದಿನಗಳಿಗೊಮ್ಮೆ ನೀರು ಹಾಯಿಸುತ್ತಾರೆ. ಬೆಳೆಯ ಕಾಲಾವದಿಯಲ್ಲಿ ಒಟ್ಟು ೮ ರಿಂದ ೧೦ ಸಲ ನೀರನ್ನು ಹಾಯಿಸಿ ಬೆಳೆಯನ್ನು ಬೆಳೆಯುತ್ತಾರೆ.

### ಕಬ್ಬು

ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿ ಮತ್ತು ತಿಪಟೂರು ತಾಲೂಕುಗಳನ್ನು ಹೊರತುಪಡಿಸಿದರೆ ಉಳಿದೆಲ್ಲ ತಾಲೂಕುಗಳಲ್ಲಿ ಕಬ್ಬನ್ನು ಬೆಳೆಯುತ್ತಾರೆ. ಇದರ ವೈಜ್ಞಾನಿಕ ಹೆಸರು. 'ಸಖ್ಯಾರಮ್ ಅಫಿಸಿನೇರಮ್'[೨೭] ಎಂದಾಗಿದೆ. ತುರುವೇಕೆರೆ ತಾಲೂಕು ಪ್ರದೇಶದಲ್ಲಿ ಹಿಂದಿನ ಕಾಲದಿಂದಲೂ ಕಬ್ಬನ್ನು ಬೆಳೆಯಲಾಗುತ್ತಿದ್ದು, ಪ್ರಸ್ತುತವಾಗಿ ನೀರಾವರಿ ಬೆಳೆಯ ಕಬ್ಬು ಕಂಡು ಬಂದಿದೆ. ೧೯೫೯-೬೦ರಲ್ಲಿ ೭೯ ಎಕರೆ ಕಬ್ಬಿನ ಸಾಗುವಳಿಯಾಗಿದ್ದರೆ, ೧೯೬೬-೬೭ರಲ್ಲಿ ೮೦ ಎಕರೆಯಷ್ಟು[೨೮] ಕಂಡು ಬಂದಿದೆ. ೨೦೦೯-೧೦ರ ತರಿ ಭೂಮಿಯಲ್ಲಿ ಹಿಂಗಾರು ಹಂಗಾಮಿನ ೧೫ ಎಕರೆ ಕಬ್ಬಿನ ಬೆಳೆಯ ಗುರಿ ಮತ್ತು ೧೫ ಎಕರೆ ಪ್ರಗತಿ ಕಂಡು ಬಂದಿದೆ. ಅದೇ ರೀತಿ ಬೇಸಿಗೆ ಹಂಗಾಮಿನ ತರಿ ಭೂಮಿಯಲ್ಲಿ ೧೨ ಎಕರೆ ಗುರಿ ಮತ್ತು ೧೨ ಎಕರೆ ಪ್ರಗತಿ ಅಥವಾ ಸಾಗುವಳಿ ಮಾಡಲಾಗಿದೆ.[೨೯] ಕಬ್ಬಿನ ಬೇಸಾಯಕ್ಕೆ ಸರಾಸರಿ ೨೪° ಸೆಂ.ಮೀ. ರಿಂದ ೨೫° ಸೆಂ.ಮೀ. ಉಷ್ಣಾಂಶ ಮತ್ತು ಮಳೆಯು ಸರಾಸರಿ ೨೦೦-೩೦೦ ಸೆಂ.ಮೀ.[೩೦] ಬೇಕಾಗುತ್ತದೆ.

ಕಬ್ಬನ್ನು ಎರಡು ಋತುಗಳಲ್ಲಿ ನಾಟಿ ಮಾಡುತ್ತಾರೆ. ಮೊದಲ ಋತು ಜನವರಿ ಅಥವಾ ಫೆಬ್ರವರಿಯಾದರೆ ಮತ್ತೊಂದು ಋತು ಜುಲೈ ಅಥವಾ ಆಗಸ್ಟ್ ತಿಂಗಳು ಆಗಿರುತ್ತದೆ.

ಮೊದಲ ಋತುವಿನಲ್ಲಿ ಅಂದರೆ ಜನವರಿ ಅಥವಾ ಫೆಬ್ರವರಿಯಲ್ಲಿ ನಾಟಿ ಮಾಡಿದ ಕಬ್ಬು ಮಳೆಯಿಂದ ಬೆಳವಣಿಗೆಯಾಗಿ ವ್ಯಾಪಕವಾಗಿ ಬೇರು ಬಿಟ್ಟು ಬೇಗನೇ ಕಟಾವಿಗೆ ಬರುತ್ತದೆ. ಎರಡನೇ ಋತುವಿನಲ್ಲಿ ಬೆಳೆದ ಕಬ್ಬಿಗೆ ಯಾವ ಅನುಕೂಲವು ದೊರೆಯದೇ ನೀರಾವರಿ ಮೇಲೆ ಅವಲಂಬನೆಯಾಗಿರುತ್ತದೆ.

ಈ ಪ್ರದೇಶದಲ್ಲಿ ವಿವಿಧ ರೀತಿಯ ಕಬ್ಬಿನ ತಳಿಗಳಿರುತ್ತವೆ. ಅವುಗಳಲ್ಲಿ ಹಳೆಯ ಮತ್ತು ದೇಶೀಯ ಕಬ್ಬು ಮೃದುವಾಗಿದ್ದು, ಸರಳವಾಗಿ ಇದನ್ನು ಗಾಣದ ಮೂಲಕ ನುರಿಸಬಹುದು. ಅಲ್ಲದೆ ತಿನ್ನಲಿಕ್ಕೂ ಮೃದುವಾಗಿರುತ್ತದೆ. ಈ ತಳಿಗಳನ್ನು 'ರಸದಾಳಿ' ಎಂದು ಕರೆಯುತ್ತಾರೆ. ರಸದಾಳಿಯಲ್ಲಿ ಎರಡು ಪ್ರಕಾರಗಳಿರುತ್ತಿವೆ. ಒಂದು ದಪ್ಪ ಇನ್ನೊಂದು ತೆಳ್ಳಗೆ ಇರುತ್ತದೆ. ಈ ತಳಿಯ ಕಬ್ಬು ಮೃದುವಾಗಿದ್ದು, ಹಸಿರು ಮಿಶ್ರಿತ ಹಳದಿ ಸಿಪ್ಪೆ ಹೊಂದಿದ್ದು, ೧೦ ತಿಂಗಳಲ್ಲಿ ಕೊಯ್ಲಿಗೆ ಬರುತ್ತದೆ. ಪ್ರತಿಶತ ೧೬ ರಷ್ಟು ಸಕ್ಕರೆ ಅಂಶ ಇದ್ದು, ಸಾಧಾರಣ ಇಳುವರಿ ಕೊಡುತ್ತದೆ. ಆದರೆ ಈ ತಳಿಯ ಕಬ್ಬಿಗೆ ಸಾಕಷ್ಟು ಪ್ರಮಾಣದಲ್ಲಿ ನೀರಾವರಿ ಮತ್ತು ಗೊಬ್ಬರದ ಬಳಕೆ ಮಾಡುತ್ತಾರೆ. ಇತ್ತೀಚೆಗೆ ಮತ್ತೊಂದು ಕಂಡುಬಂದಿದೆ. ಅದರ ಹೆಸರು 'ಪಟ್ಟಾಪಟ್ಟಿ' ಈ ತಳಿಯನ್ನು ವೆಲ್ಲೂರಿನಿಂದ ತರಿಸಲಾಗಿದೆ ಎಂದು ಹೇಳುತ್ತಾರೆ. ಇದು ರಸದಾಳಿ ಕಬ್ಬಿಗಿಂತ ಸ್ವಲ್ಪ ಬಿರುಸು ಸಿಪ್ಪೆ ಮೇಲೆ ಹಳದಿ ಹಾಗೂ ಕೆಲವು ಪಟ್ಟಿಗಳಿರುತ್ತವೆ. ಅಲ್ಲದೆ ರಸದಾಳಿ ಕಬ್ಬಿಗಿಂತ ತುಂಬಾ ಎತ್ತರ ಬೆಳೆಯುತ್ತದೆ. ಇದರಲ್ಲಿ ೧.೨ರಷ್ಟು ಸಕ್ಕರೆ ಅಂಶವಿರುತ್ತದೆ. ಈ ತಳಿಯ ಕಬ್ಬನ್ನು ಕಟಾವು ಮಾಡಲು ೧೨ ತಿಂಗಳು ಬೇಕಾಗುತ್ತದೆ. ಇದು ಉತ್ತಮ ಗುಣಮಟ್ಟದ ಬೆಲ್ಲ ಕೊಡುತ್ತದೆ. ಇದಕ್ಕೆ ಹೆಚ್ಚು ನೀರು ಗೊಬ್ಬರ ಬಳಕೆ ಮಾಡಬೇಕಾಗುತ್ತದೆ. ೧ ಎಕರೆಗೆ ೪೦ ಟನ್‌ಗಳಷ್ಟು ಇಳುವರಿ ಬರುತ್ತದೆ. HM-೩೨೦ ಮತ್ತು CO-೪೧೯ ಇವು ಇತ್ತೀಚಿನ ತಳಿಗಳಾಗಿದ್ದು ಅಧಿಕ ಇಳುವರಿ ಮತ್ತು ಉತ್ತಮ ಗುಣಮಟ್ಟದ ಸಕ್ಕರೆಯನ್ನು ಕೊಡುತ್ತವೆ. ಇಳುವರಿ ಪ್ರತಿ ಎಕರೆಗೆ ಸುಮಾರು ೫೫ ರಿಂದ ೬೦ ಟನ್‌ಗಳಷ್ಟು ಬರುತ್ತದೆ.

ಕಬ್ಬು ಬೆಳೆಯನ್ನು ಸಾಗುವಳಿ ಮಾಡಲು ಕಬ್ಬಿನ ಭೂಮಿಯನ್ನು ಮೂರರಿಂದ ನಾಲ್ಕು ಸಲ ಮೌಲ್ಡಾಬೋರ್ಡ್‌ನಿಂದ ನೇಗಿಲ ಹೊಡೆದು ಒಂದು ಅಥವಾ ಎರಡು ಸಲ ಕುಂಟೆಯಿಂದ ಸಾಗುವಳಿ ಮಾಡಬೇಕು. ೧೦ ರಿಂದ ೨೦ ಚಕ್ಕಡಿ ತಿಪ್ಪೆಗೊಬ್ಬರ ಹಾಗೂ ೫೦೧bs ಫಾಸ್ಪೇಟ್ ಮತ್ತು ೫೦೧bs ನಷ್ಟು ನೈಟ್ರೋಜನ್ ರಸಾಯನಿಕ ಗೊಬ್ಬರವನ್ನು ಕಬ್ಬು ನಾಟಿ ಮಾಡುವ ಸಮಯದಲ್ಲಿ ಕೊಡಬೇಕಾಗುತ್ತದೆ. ೩ ತಿಂಗಳ ನಂತರ ಮತ್ತೆ ೫೦೧bs ನೈಟ್ರೋಜನ್ ಉಪಯೋಗಿಸಬೇಕು. ಕಬ್ಬನ್ನು ಬದುಕಟ್ಟಿ ನೇಗಿಲ ಸಾಲುಗಳಲ್ಲಿ ೩ ಪೂಟ್‌ಗೊಂದರಂತೆ ನಾಟಿ ಮಾಡುವುದು. ನಂತರ ಕಬ್ಬು ಕಟಾವಿಗೆ ಬಂದಾಗ ಇದರ ಎಲೆ ಮತ್ತು ಕಬ್ಬಿನಲ್ಲಿ ಬದಲಾವಣೆ ಕಂಡುಬರುತ್ತದೆ. ನಂತರ ಎಲೆಗಳು ಒಣಗಲಾರಂಭಿಸುತ್ತವೆ. ಆ ಕಬ್ಬನ್ನು ಕೂಯ್ಲು ಮಾಡಿ ಬೆಲ್ಲ ಅಥವಾ ಸಕ್ಕರೆ ತಯಾರಿಸಲು ಕಳಿಸುತ್ತಾರೆ.

**ತೆಂಗು**

ತುರುವೇಕೆರೆ ತಾಲೂಕಿನಲ್ಲಿ ತೆಂಗಿನ ಉತ್ಪಾದನೆಯು ನೀರಾವರಿ ಬೆಳೆಗಳಲ್ಲಿ ಪ್ರಮುಖವಾದುದಾಗಿದೆ. ತೆಂಗಿನ ಉತ್ಪಾದನೆಯು ೧೯೫೯-೬೦ರಲ್ಲಿ ೧೧,೬೦೦ ಎಕರೆ ಇದ್ದು, ೧೯೬೬-೬೭ರ ಅವಧಿಯಲ್ಲಿ ೧೪,೨೭೫ ಎಕರೆಗಳಷ್ಟು[೩೨] ಆಗಿದೆ. ಇತ್ತೀಚೆಗೆ ಸುಮಾರು ೬೭,೩೧೩ ಎಕರೆಗಳಿಗೂ[೩೩] ಹೆಚ್ಚು ಭೂಮಿಯಲ್ಲಿ ತೆಂಗಿನ ಸಾಗುವಳಿ ಕಂಡುಬಂದಿದೆ. ಈ ಪರಿಸರದಲ್ಲಿ ವಿವಿಧ ರೀತಿಯ ತೆಂಗಿನ ತಳಿಗಳಿದ್ದು, ಅದರಲ್ಲಿ ‘ಗಂಗಾಪಾಣಿ’[೩೪] ಎಂಬ ಜಾತಿ ಮುಖ್ಯವಾದುದು. ತೆಂಗು, ತಾಳೆ ಜಾತಿಯ ಮರದಂತೆ ನಿರಂತರವಾಗಿ ಬೆಳೆಯುವ ಖಾಯಂ ತೋಟಗಾರಿಕೆ ಬೆಳೆಯಾಗಿದೆ. ತಾಲೂಕಿನ ಕೆರೆ ಪಕ್ಕದಲ್ಲಿನ ತೆಂಗಿನ ಜಮೀನು ನೀರು ಮುಳುಗಡೆಯಾಗಿ ಕಡಿಮೆ ಇಳುವರಿ ಹೊಂದಿದ್ದರೆ, ಕೆರೆಯಿಂದ ಸ್ವಲ್ಪ ದೂರದಲ್ಲಿ ಇರುವ ತೆಂಗಿನ ಬೆಳೆಗೆ ನೀರು ಸಮರ್ಪಕವಾಗಿ ಹಂಚಿಕೆಯಾಗಿ (ಹಾಯಿಸಿ) ಅಧಿಕ ಇಳುವರಿ ಪಡೆಯಲಾಗುತ್ತಿದೆ. ತೆಂಗನ್ನು ೨೫ ರಿಂದ ೩೦°ಸೆಂ.ಮೀ.ಯಷ್ಟು ಉಷ್ಣಾಂಶ ಮತ್ತು ೧೨೦ ರಿಂದ ೧೩೦° ಸೆಂ.ಮೀ[೩೫] ಮಳೆ ಇರುವ ಪ್ರದೇಶದಲ್ಲಿ ಬೆಳೆಯಲಾಗುತ್ತದೆ.

ತೆಂಗಿನ ಬೆಳೆಯು ನಿರಂತರ ಫಲ ನೀಡುವ ಬಹುವಾರ್ಷಿಕ ಮರ. ಇದರ ಸಸಿಗಳನ್ನು ಚೆನ್ನಾಗಿ ಬಲಿತ ಕಾಯಿಗಳನ್ನು ಹೂಳಿ ಬೆಳಸಲಾಗುವುದು. ಈ ಮಡಿಗಳಲ್ಲಿ ಒಂದರಿಂದ ಮೂರು ವರ್ಷಗಳವರೆಗೆ ಬೆಳೆದ ಸಸಿಗಳನ್ನು ೩' x ೩' ಪ್ರಮಾಣದ ಗುಂಡಿಗಳಲ್ಲಿ ಸುಮಾರು ೪೦ ಅಡಿ ಅಂತರದಲ್ಲಿ ನೆಡಲಾಗುವುದು. ತೆಂಗಿನ ಸಸಿಗಳು ಪೂರ್ಣವಾಗಿ ಬೆಳೆಯುವವರೆಗೆ ಆ ಪ್ರದೇಶದಲ್ಲಿ ವಿವಿಧ ಬೆಳೆಗಳಾದ ಬಾಳೆ, ಶುಂಠಿ ಹಾಗೂ ತರಕಾರಿಗಳನ್ನು ಬೆಳೆಯಬಹುದು. ಈ ಮರಗಳು ನೆಟ್ಟ ೬-೭ ವರ್ಷಗಳಿಂದ ಸುಮಾರು ೫೦ ರಿಂದ ೬೦ ವರ್ಷಗಳವರೆಗೆ ನಿರಂತರವಾಗಿ ಫಲ ನೀಡುತ್ತವೆ. ತೆಂಗಿನ ತೋಟಗಳನ್ನು ಚೆನ್ನಾಗಿ ಉಳುಮೆ ಮಾಡಿ, ಮಳೆ ಕಡಿಮೆ ಇರುವ ಅವಧಿಯಲ್ಲಿ ನೀರನ್ನು ಪೂರೈಸಿ ಹೆಚ್ಚು ಉತ್ಪಾದನೆ ಮಾಡುತ್ತಾರೆ. ಎಳೆನೀರನ್ನು ೬-೭ ತಿಂಗಳಿನಲ್ಲಿ ಹಾಗೂ ಕೊಬ್ಬರಿಗಾಗಿ ಬಳಸುವ ಕಾಯಿಗಳನ್ನು ೧೧ ತಿಂಗಳ ನಂತರ ಕೀಳಲಾಗುವುದು. ಚೆನ್ನಾಗಿ ಬಲಿತ ಕಾಯಿಗಳನ್ನು ಕಿತ್ತು ೬ ರಿಂದ ೧೨ ತಿಂಗಳುಗಳವರೆಗೆ ಸಂಗ್ರಹಿಸಿ, ಕೊಬ್ಬರಿ ಮಾಡಿ ಅಧಿಕ ಲಾಭಗಳಿಸುತ್ತಾರೆ.

**ಅಡಿಕೆ**

ತುರುವೇಕೆರೆ ಪರಿಸರದ ಕೆಲವು ಪ್ರದೇಶಗಳಲ್ಲಿ ಅಡಿಕೆಯೇ ಒಂದು ಪ್ರಮುಖ ನೀರಾವರಿ ಬೆಳೆಯಾಗಿದೆ. ಉದಾ:- ಸಂಪಿಗೆ ಸುತ್ತಮುತ್ತಲಿನ ಗ್ರಾಮಗಳು. ಅಡಿಕೆ ಮರಕ್ಕೆ ನೀರನ್ನು ಹಾಯಿಸಿ ಬೆಳೆಸುತ್ತಾರೆ. ಅಂದರೆ ತಿಂಗಳಿಗೆ ಸುಮಾರು ೨ ಬಾರಿ ಆದರೂ ನೀರನ್ನು

ಹಾಯಿಸುತ್ತಾರೆ. ಈ ಮರವನ್ನು ಹೆಚ್ಚಾಗಿ ಏಲಕ್ಕಿ, ಮೆಣಸು ಮತ್ತು ಬಾಳೆ ಜೊತೆ ಬೆಳೆಸಿದ್ದಾರೆ. ಇದರ ವೈಜ್ಞಾನಿಕ ಹೆಸರು 'ಅರೇಕಕಾಚು'[೩೬] ಎಂದು. ಇದನ್ನು ೧೫ ರಿಂದ ೩೫° ಸೆಂ.ಮೀ. ಉಷ್ಣಾಂಶ ಮತ್ತು ೧೫೦ ರಿಂದ ೧೮೦ ಸೆಂ.ಮೀ.[೩೭] ಮಳೆಯಲ್ಲಿ ಬೆಳೆಯುತ್ತಾರೆ. ಜೇಡಿ ಮಿಶ್ರಿತ ಮಣ್ಣು ಈ ಬೆಳೆಗೆ ಸೂಕ್ತವಾದುದಾಗಿದೆ. ಈ ಬೆಳೆಯನ್ನು ಬೆಳೆಯಲು ಅಡಿಕೆ ಸಸಿಗಳನ್ನು ಸಸಿ ಮಡಿಗಳಲ್ಲಿ ಬೆಳೆಸಿ ನಂತರ ನೆಡಲಾಗುವುದು. ಮರವು ಸುಮಾರು ೨೦-೨೫ ಮೀ. ಎತ್ತರದವರೆಗೆ ಬೆಳೆಯುವುದು ಅಡಿಕೆ ಕಾಯಿಯನ್ನು ಕಿತ್ತು, ಸುಲಿದು, ಬೇಯಿಸಿ ಒಣಗಿಸಿದ ನಂತರ ಮಾರಾಟ ಮಾಡುವರು. ಇದರ ಮರಗಳನ್ನು ತೆಂಗು, ಬಾಳೆ, ವೀಳ್ಯದೆಲೆ ಮುಂತಾದವುಗಳೊಡನೆ ಮಿಶ್ರ ಬೆಳೆಯಾಗಿ ಬೆಳೆಯುವರು.

### ಬಾಳೆ

ಈ ಪ್ರದೇಶದ ನೀರಾವರಿ ಬೆಳೆಗಳಲ್ಲಿ ಬಾಳೆಯು ಪ್ರಮುಖವಾದುದು. ಕೈತೋಟ, ತರಕಾರಿ ಮತ್ತು ಹಣ್ಣಿನ ಬೆಳೆಯಾಗಿ, ಅದೇ ರೀತಿ ವಾಣಿಜ್ಯ ಬೆಳೆಯಾಗಿ ಬಾಳೆಗೆ ಇಲ್ಲಿ ಅಗ್ರಸ್ಥಾನವಿದೆ. ಇದಕ್ಕೆ 'ಮ್ಯೂಸಾಸೆಪಿಯೆಂಟಬಂ'[೩೮] ಎಂಬ ವೈಜ್ಞಾನಿಕ ಹೆಸರು ಇದೆ. ಬಾಳೆಯು ೧೦ ರಿಂದ ೧೨ ತಿಂಗಳಿನಷ್ಟು ದೀರ್ಘಾವಧಿಯ ಬೆಳೆಯಾಗಿದ್ದು, ಸರಾಸರಿ ಸುಮಾರು ೨೦°ಯಿಂದ ೩೦° ಸೆಂ.ಮೀ.ನಷ್ಟಕ್ಕೂ ಹೆಚ್ಚು ಉಷ್ಣಾಂಶದಲ್ಲಿ ಬೆಳೆಯುತ್ತಾರೆ. ತುರುವೇಕೆರೆ ತಾಲೂಕಿನಲ್ಲಿ ಅಡಿಕೆ ಮತ್ತು ತೆಂಗಿನ ಮಧ್ಯೆ ಹೆಚ್ಚು ಬಾಳೆ ಕಂಡುಬಂದಿವೆ. ಇವುಗಳಿಗೆ ಕೆರೆಯ ನೀರನ್ನು ಸಮರ್ಪಕವಾಗಿ ಹಾಯಿಸಿ ಅಧಿಕ ಉತ್ಪಾದನೆ ಮಾಡುತ್ತಾರೆ. ಈ ಬೆಳೆಯಲ್ಲಿ ವಿವಿಧ ರೀತಿಯ ತಳಿಗಳಿವೆ. ಅವುಗಳಲ್ಲಿ ಏಲಕ್ಕಿ ಬಾಳೆ, ಪುಟ್‌ಬಾಳೆ ಇವು ಈ ಪ್ರದೇಶದಲ್ಲಿ ಹೆಚ್ಚುವರಿ ಫಸಲನ್ನು ನೀಡುತ್ತಿವೆ. ಭತ್ತ, ತೆಂಗು, ಅಡಿಕೆ ಮತ್ತು ಬಾಳೆಗಳು ಈ ತಾಲೂಕಿನ ಬಯಲು ಪ್ರದೇಶಗಳ ಪ್ರಧಾನ ಬೆಳೆಗಳಾದರೆ ಜೋಳ, ನೆಲೆಗಡಲೆ ಮತ್ತು ತರಕಾರಿಗಳು ಅನುಷಂಗಿಕ ಬೆಳೆಗಳಾಗಿವೆ.

ಮೇಲ್ಮಟ್ಟದ ಖುಷ್ಕಿ ಭೂಮಿ ಅಥವಾ ಜಮೀನಿನಲ್ಲಿ ಮಳೆ, ಕೆರೆ ಮತ್ತು ಬಾವಿ ನೀರುಗಳನ್ನಾಶ್ರಯಿಸಿ ಬೆಳೆಯುವ ಪ್ರಮುಖ ಆಹಾರ ಬೆಳೆಗಳೆಂದರೆ ಜೋಳ, ಇದರಲ್ಲಿ ಸ್ಥಳೀಯ (ಜವಾರಿ) ಮತ್ತು ಮಿಶ್ರ (ಹೈಬ್ರಿಡ್) ಎಂಬ ಎರಡು ತಳಿಗಳಿವೆ. ಹೈಬ್ರಿಡ್ ಜೋಳದಲ್ಲಿ ಮೆಕ್ಕೆಜೋಳವೆಂಬ ಇನ್ನೊಂದು ಪ್ರಭೇದವೂ ಇದೆ. ಇಂತಹ ಪ್ರದೇಶದಲ್ಲಿ ಜೋಳವಲ್ಲದೆ, ನವಣೆ, ಸಜ್ಜೆ, ರಾಗಿ, ಗೋಧಿ ಇತ್ಯಾದಿ ಆಹಾರ ಧಾನ್ಯಗಳನ್ನೂ ಎಳ್ಳು, ಹುರುಳಿ, ಸೂರ್ಯಕಾಂತಿ, ಕುಸುಬೆ, ನೆಲೆಗಡಲೆ ಮುಂತಾದ ಎಣ್ಣೆಕಾಳುಗಳನ್ನೂ, ಬದನೆ, ಬೆಂಡೆಕಾಯಿ, ಟೊಮೊಟೋ, ಸೊಪ್ಪು, ಮಾದಲಾದ ಕಾಯಿಪಲ್ಯ (ತರಕಾರಿ)ಗಳನ್ನೂ ಈರುಳ್ಳಿ, ಮೆಣಸು, ಮೆಣಸಿನಕಾಯಿ,

ಶುಂಠಿ, ಅರಿಶಿಣ, ಮುಂತಾದ ಸಂಬಾರ ಪದಾರ್ಥಗಳನ್ನೂ ತೊಗರಿ, ಹೆಸರು, ಕಡ್ಲೆ, ಅಲಸಂದಿ, ಹುರುಳಿಗಳಂತಹ ದ್ವಿದಳ ಧಾನ್ಯಗಳನ್ನೂ ರೇಷ್ಮೆ, ಹತ್ತಿ, ಸೆಣಬು, ನೀಲಗಿರಿ ಇತ್ಯಾದಿ ವಾಣಿಜ್ಯ ಬೆಳೆಗಳನ್ನೂ, ಮಾವು, ನಿಂಬೆ ಮತ್ತು ಸಪೋಟಗಳಂತಹ ಹಣ್ಣುಗಳನ್ನೂ ಅನುಷಂಗಿಕವಾಗಿ ಬೆಳೆಯಲಾಗುತ್ತದೆ.[೫೯]

ಪ್ರಸ್ತುತ ತುರುವೇಕೆರೆ ತಾಲೂಕಿನಾದ್ಯಂತ ಪೂರ್ವ ಮುಂಗಾರಿನಲ್ಲಿ ಬಿತ್ತನೆ ಮಾಡಿರುವ ಹೆಸರು ಬೆಳೆ ಹುಲುಸಾಗಿ ಬೆಳೆದು ನಿಂತಿದ್ದು, ಒಂದೆರಡು ಮಳೆ ಬಿದ್ದರೆ ಉತ್ತಮ ಇಳುವರಿ ಪಡೆಯುವ ನಿರೀಕ್ಷೆಯಿದೆ ಎಂದು ಕೃಷಿ ಇಲಾಖೆಯ ಸಹಾಯಕ ನಿರ್ದೇಶಕ ಗೋಪ್ಯನಾಯಕ ತಿಳಿಸಿದ್ದಾರೆ.[೬೦]

ತಾಲೂಕಿನ ನಾಲ್ಕು ಹೋಬಳಿಗಳಲ್ಲಿ ಒಟ್ಟಾರೆ ೨೯೯೮ ಹೆಕ್ಟೇರ್‌ನಲ್ಲಿ ಪೂರ್ವ ಮುಂಗಾರು ಬೆಳೆಗಳಾದ ಹೆಸರು, ತೊಗರಿ, ಅಲಸಂದೆ, ಹರಳು, ಎಳ್ಳು, ನೆಲಗಡಲೆ, ಉದ್ದು ಬಿತ್ತಲಾಗಿದೆ. ಈ ಪೈಕಿ ೧,೧೦೭ ಹೆಕ್ಟೇರ್ ಪ್ರದೇಶದಲ್ಲಿ ಹೆಸರು, ತೊಗರಿ ಮತ್ತು ಹರಳನ್ನು ಕ್ರಮವಾಗಿ ೯೯೬ ಮತ್ತು ೩೦೦ ಹೆಕ್ಟೇರ್‌ನಲ್ಲಿ ಬೆಳೆಯಲಾಗಿದೆ. ಕಸಬಾದಲ್ಲಿ ಅತಿಹೆಚ್ಚು ಅಂದರೆ ೪೨೪ ಹೆಕ್ಟೇರ್‌ಗಳಲ್ಲಿ ಹೆಸರು ಬಿತ್ತಲಾಗಿದೆ. ಈ ಹೋಬಳಿಯ ಜನರು ಕೆರೆ ಮತ್ತು ಮಳೆ ನೀರನ್ನು ಬಳಸಿ ಉತ್ತಮ ಬೆಳೆ ಪಡೆಯುವ ನಿರೀಕ್ಷೆಯಲ್ಲಿದ್ದರೆ ಇತರೆ ಹೋಬಳಿಯ ರೈತರು ಮಳೆಯ ಆತಂತಕ್ಕೆ ಒಳಗಾಗಿದ್ದಾರೆ. ಇದು ಅನುಷಂಗಿಕ ಬೆಳೆಗಳಿಗೆ ಉತ್ತಮ ಉದಾಹರಣೆ ಆಗಿದೆ ಎನ್ನಬಹುದು. ಕೆರೆಯ ನೀರು ಕೇವಲ ಕೃಷಿಗೆ ಮಾತ್ರ ಬಳಕೆಯಾಗದೆ ಇನ್ನಿತರ ಮೂಲಗಳಿಗೆ ಬಳಕೆಯಾಗುತ್ತದೆ.

## ಮೀನುಗಾರಿಕೆ

ಈ ಪರಿಸರದ ಕೆರೆಗಳು ಮೀನುಗಾರಿಕೆಗೆ ವಿಶೇಷವಾಗಿ ನೆರವಾಗಿವೆ. ಇಲ್ಲಿನ ತಾಲೂಕು ಪಂಚಾಯಿತ್ ಹಾಗೂ ಗ್ರಾಮ ಪಂಚಾಯಿತ್‌ಗಳು ಮೀನುಗಾರಿಕೆಯನ್ನು ಬಹಳವಾಗಿ ಪ್ರೋತ್ಸಾಹಿಸುತ್ತಿವೆ. ತುಮಕೂರು ಜಿಲ್ಲೆಯಲ್ಲಿ ೧೯೭೪-೭೫ನೇ ಸಾಲಿನಿಂದ ೧೯೭೮-೭೯ನೇ ಸಾಲಿನವರೆಗೆ ಒಟ್ಟು ೮೦ ಕೆರೆಗಳಲ್ಲಿ ಮೀನಿನ ಮರಿಗಳನ್ನು ಬಿಟ್ಟು ಬೆಳೆಸಲಾಯಿತು. ಅಲ್ಲದೆ ಈ ಕೆರೆಗಳಿಂದ ಒಟ್ಟು ೬೭.೨೪ ಮೆಟ್ರಿಕ್ ಟನ್‌ಗಳಷ್ಟು[೬೧] ಮೀನನ್ನು ಉತ್ಪಾದಿಸುತ್ತಾರೆ. ಪ್ರಸ್ತುತ ತುರುವೇಕೆರೆ ತಾಲೂಕಿನಲ್ಲಿ ೨೦ ಕೆರೆಗಳಿಗೆ ಸಣ್ಣ ಮೀನುಗಾರ ಇಲಾಖೆಯು ಮೀನಿನ ಮರಿಗಳನ್ನು ಬಿಟ್ಟು ಪೋಷಿಸುತ್ತಿದೆ. ಈ ಕೆರೆಗಳನ್ನು ವಾರ್ಷಿಕವಾಗಿ ವಿಲೇವಾರಿ ಮಾಡಿ ೨೦೦೮-೦೯ರಲ್ಲಿ ೧,೮೮,೯೮೧ರಷ್ಟಕ್ಕೆ[೬೨] ವಿಲೇವಾರಿಯಾಗಿದೆ. ಇದು ಆರ್ಥಿಕವಾಗಿ ತೊಂದರೆಯಲ್ಲಿರುವ ಗ್ರಾಮೀಣ ಅಥವಾ ನಗರ ಪ್ರದೇಶದ ಜನರಿಗೆ ಉದ್ಯೋಗಾವಕಾಶಗಳನ್ನು ಒದಗಿಸಿಕೊಟ್ಟಿದೆ. ಅಲ್ಲದೆ ಆಹಾರವು ಕೂಡ ಆಗಿದೆ.

### ಪಶುಪಾಲನೆ

ವ್ಯವಸಾಯ ಪ್ರದೇಶವಾದ ತುರುವೇಕೆರೆ ತಾಲೂಕಿನಲ್ಲಿ ಪಶುಪಾಲನೆ ಅಗತ್ಯವಾಗಿದೆ. ಕೃಷಿಕರು ಭೂಮಿಯನ್ನು ಉಳುಮೆ ಮಾಡಲು ಎತ್ತುಗಳನ್ನು ಹೆಚ್ಚಾಗಿ ಬಳಸಿದ್ದಾರೆ. ಈ ಜಾನುವಾರುಗಳಿಗೆ ಬೇಕಾದ ಮೇವು ಮತ್ತು ಕುಡಿಯುವ ನೀರಿನ ಸೌಲಭ್ಯವನ್ನು ಕೆರೆಗಳಿಂದ ಪೂರೈಸಲಾಗುತ್ತಿತ್ತು. ಇದರಿಂದ ಈ ಪ್ರದೇಶದಲ್ಲಿ ದನ, ಎಮ್ಮೆ, ಕುರಿ, ಮೇಕೆ, ಕೋಳಿ, ಹಂದಿಗಳ ಸಾಕಣಿಕೆ ಗಣನೀಯವಾಗಿ ಕಂಡು ಬಂದಿದೆ. ಪಶುಪಾಲನೆ ಇಲ್ಲದೆ ರೈತನ ಒಕ್ಕಲುತನ ಅಸಾಧ್ಯ. ಪಶುಪಾಲನೆಯೂ ರೈತರ ಬದುಕಿನಲ್ಲಿ ಮಹತ್ವದ್ದಾಗಿದೆ. ೧೯೯೧ರ ಜಾನುವಾರು ಗಣತಿಯ ಪ್ರಕಾರ ತಾಲೂಕಿನಲ್ಲಿರುವ ಜಾನುವಾರುಗಳು ೧,೬೮,೩೮೪[೪೬] ಇದ್ದರೆ, ೨೦೦೧ರಲ್ಲಿ ೨ ಲಕ್ಷಕ್ಕೂ ಅಧಿಕವಾದ ಜಾನುವಾರುಗಳು ಕಂಡುಬಂದಿವೆ. ಅವುಗಳಲ್ಲಿ ಗಣನೀಯ ಸಂಖ್ಯೆಯವು ದನಗಳು, ಎಮ್ಮೆಗಳು, ಕುರಿಗಳು ಹಾಗೂ ಮೇಕೆಗಳಿವೆ. ಈ ತಾಲೂಕಿನಲ್ಲಿ ಕುರಿಗಳನ್ನು ಮಾಂಸಕ್ಕಾಗಿ ಸಾಕುತ್ತಾರೆ. ಕುರಿಯ ರೋಮದಿಂದ ಉಣ್ಣೆ ಮತ್ತು ಸೊಂಟದ ಬೆಲ್ಟ್ ತಯಾರಿಸಲಾಗುತ್ತದೆ. ಇಲ್ಲಿ ಕುರಿಗೆ ಹೋಲಿಸಿದರೆ ಆಡುಗಳ ಪ್ರಮಾಣ ಕಡಿಮೆ ಇದೆ. ಆಡುಗಳನ್ನು ಮಾಂಸಕ್ಕಾಗಿಯೂ, ಹಾಲಿಗಾಗಿಯೂ ಬಳಸುತ್ತಾರೆ. ಆಡಿನ ಚರ್ಮವು ತಮಟೆ ತಯಾರಿಕೆಗೆ ಉಪಯುಕ್ತವಾಗಿದೆ.

ಪಶುಪಾಲನೆಯತ್ತ ಜನರಿಗೆ ಆಸಕ್ತಿ ಮೂಡಿಸಲು, ಹೈನುಗಾರಿಕೆಯನ್ನು ವೃದ್ಧಿಪಡಿಸಲು ತಾಲೂಕಿನ ವಿವಿಧ ಬ್ಯಾಂಕುಗಳ ಜಾನುವಾರಗಳನ್ನು ಕೊಳ್ಳಲು ರೈತರಿಗೆ ಸಾಕಷ್ಟು ಸಾಲ ನೀಡುತ್ತವೆ. ಪಶುಗಳ ಆರೋಗ್ಯ ಸಂರಕ್ಷಣೆಗೆ ಅಗತ್ಯ ಕ್ರಮಕೈಗೊಳ್ಳಲಾಗುತ್ತದೆ. ಕಾಲಕಾಲಕ್ಕೆ ಸಾಂಕ್ರಮಿಕ ರೋಗಗಳ ತಡೆಗೆ ಚುಚ್ಚುಮದ್ದು ಹಾಕಲಾಗುತ್ತಿದೆ. ಮಿಶ್ರತಳಿಯ ಅಭಿವೃದ್ಧಿಗಾಗಿ ಕೃತಕ ಗರ್ಭಧಾರಣೆ ಸೌಲಭ್ಯವನ್ನು ಒದಗಿಸಲಾಗುತ್ತಿದೆ. ಈ ಪರಸರ ಜನರು ಎಲ್ಲಾ ಸೌಲಭ್ಯವನ್ನು ಸದುಪಯೋಗ ಮಾಡಿಕೊಂಡು ಜಾನುವಾರುಗಳನ್ನು ಅಭಿವೃದ್ಧಿಪಡಿಸಿಕೊಂಡು ತಮ್ಮ ಆರ್ಥಿಕ ಸ್ಥಿತಿಗತಿಗಳನ್ನು ಸುಧಾರಿಸಿಕೊಳ್ಳುತ್ತಿದ್ದಾರೆ.

ಕೆರೆಯ ನೀರು ಏಕದಳ, ದ್ವಿದಳ, ವಾಣಿಜ್ಯ ಮತ್ತು ತೋಟದ ಬೆಳೆಗಳಿಗೆ ಉಪಯುಕ್ತವಾಗಿದ್ದರು ಕೂಡ ಕೆರೆಯ ಬಯಲು ಪ್ರದೇಶದ ಭೂಮಿಗೆ ಹೆಚ್ಚು ಉಪಯುಕ್ತವಾಗಿದೆ ಎನ್ನಬಹುದು. ಇನ್ನಿತರ ಮೂಲಗಳಾದ ಮೀನುಗಾರಿಕೆ ಮತ್ತು ಪಶುಪಾಲನೆಗೆ ಕೆರೆಯ ನೀರು ಇಂದಿಗೂ ಬಳಕೆಯಾಗುತ್ತಿರುವುದು ಕಂಡು ಬಂದಿದೆ. ಒಟ್ಟಾರೆಯಾಗಿ ಕೆರೆಯ ನೀರನ್ನು ಬಳಸಿಕೊಂಡು ಯಾವ ಯಾವ ಬೆಳೆಗಳನ್ನು ಬೆಳೆಯುತ್ತಾರೆ ಹಾಗೂ ಮೀನುಗಾರಿಕೆ ಮತ್ತು ಪಶುಪಾಲನೆಯ ಅಭಿವೃದ್ಧಿಯಲ್ಲಿ ಕೆರೆಯ ಪಾತ್ರವೇನು ಎಂಬುದನ್ನು ಈ ಅಧ್ಯಾಯದಿಂದ ತಿಳಿದುಕೊಂಡಿದ್ದು, ಮುಂದಿನ ಅಧ್ಯಾಯದಲ್ಲಿ ಕೆರೆಗೆ ಸಂಬಂಧಿಸಿದ ಆಚರಣೆಗಳನ್ನು ಕುರಿತು ಮಾಹಿತಿ ಒದಗಿಸಲಾಗಿದೆ.

## ಅಡಿ ಟಿಪ್ಪಣಿಗಳು

೧. ಕೃಷಿ ಇಲಾಖೆಯ ವರದಿ, ತುರುವೇಕೆರೆ.

೨. ಅದೇ.

೩. ಅದೇ.

೪. ಗೋಪಾಲ್ ಆರ್., (ಸಂ), ೨೦೦೯; ತುಮಕೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು. ೯೪.

೫. ಅದೇ. ಪು. ೪೧.

೬. ಸ್ಪರ್ಧಾ ಸ್ಫೂರ್ತಿ, ಜನವರಿ, ೨೦೧೦ರ ನಿಯತಕಾಲಿಕೆ, ಪು. ೮೫.

೭. ಹಯವದನ್‌ರಾವ್ ಸಿ., ೧೯೮೪; ಮೈಸೂರು ಗ್ಯಾಸೆಟಿಯರ್, ಪು. ೧೩೦.

೮. ಅದೇ.

೯. ಕೃಷಿ ಇಲಾಖೆ ವರದಿ.

೧೦. ಅದೇ.

೧೧. ಗೋಪಾಲ್ ಆರ್., (ಸಂ), ೨೦೦೯; ಪೂರ್ವೋಕ್ತ, ಪು. ೫೫೭; ಪಾರ್ಥಸಾರಥಿ ಟಿ.ಎ., ೨೦೦೮; ಮಂಡ್ಯ ಜಿಲ್ಲೆ ಗ್ಯಾಸೆಟಿಯರ್, ಪು. ೨೦೬.

೧೨. ಸ್ಪರ್ಧಾ ಸ್ಫೂರ್ತಿ, ಪೂರ್ವೋಕ್ತ, ಪು. ೮೬.

೧೩. ಅದೇ.

೧೪. ಹಯವದನ್‌ರಾವ್ ಸಿ., ಪೂರ್ವೋಕ್ತ, ಪು. ೧೧೭.

೧೫. ಕೃಷಿ ಇಲಾಖೆ. ಪೂರ್ವೋಕ್ತ.

೧೬. ಸ್ಪರ್ಧಾ ಸ್ಫೂರ್ತಿ, ಪೂರ್ವೋಕ್ತ, ಪು. ೮೬.

೧೭. ಸಂಪದ್ಗಿರಿರಾವ್ ಕೆ., (ಸಂ), ೨೦೦೬; ಕರ್ನಾಟಕ ಪರಂಪರೆ, ಸಂಪುಟ ೧, ಪು. ೬೫.

೧೮. ಸ್ಪರ್ಧಾ ಸ್ಫೂರ್ತಿ, ಪೂರ್ವೋಕ್ತ, ಪು. ೮೫.

೧೯. ಹಯವದನ್‌ರಾವ್ ಸಿ., ಪೂರ್ವೋಕ್ತ, ಪು. ೧೩೬.

೨೦. ಕೃಷಿ ಇಲಾಖೆ, ಪೂರ್ವೋಕ್ತ.

೨೧. ಅದೇ.

೨೨. ಅದೇ.

೨೩. ಸ್ಪರ್ಧಾ ಸ್ಫೂರ್ತಿ, ಪು. ೮೭.

೨೪. ಹಯವದನ್‌ರಾವ್ ಸಿ., ಪೂರ್ವೋಕ್ತ, ಪು. ೧೪೨.

೨೫. ಕೃಷಿ ಇಲಾಖೆ, ಪೂರ್ವೋಕ್ತ.

೨೬. ಗೋಪಾಲ್ ಆರ್. (ಸಂ), ಪೂರ್ವೋಕ್ತ, ಪು. ೫೬೮.

೨೭. ಸ್ಪರ್ಧಾ ಸ್ಫೂರ್ತಿ, ಪೂರ್ವೋಕ್ತ, ಪು. ೮೮.

೨೮. ಹಯವದನ್‌ರಾವ್ ಸಿ., ಪೂರ್ವೋಕ್ತ, ಪು. ೧೪೪.

೨೯. ಕೃಷಿ ಇಲಾಖೆ, ಪೂರ್ವೋಕ್ತ.

೩೦. ಸ್ಪರ್ಧಾ ಸ್ಫೂರ್ತಿ, ಪೂರ್ವೋಕ್ತ, ಪು. ೮೮.

೩೧. ಗೋಪಾಲ್ ಆರ್. (ಸಂ), ಪೂರ್ವೋಕ್ತ, ಪು. ೫೭೦.

೩೨. ಹಯವದನ್‌ರಾವ್ ಸಿ., ಪೂರ್ವೋಕ್ತ, ಪು. ೧೪೫.

೩೩. ಗೋಪಾಲ್ ಆರ್., (ಸಂ), ಪೂರ್ವೋಕ್ತ, ಪು. ೫೭೦.

೩೪. ಸಂಪದ್ಗಿರಿರಾವ್ ಕೆ., (ಸಂ), ಪೂರ್ವೋಕ್ತ, ಪು. ೬೬.

೩೫. ಸ್ಪರ್ಧಾ ಸ್ಫೂರ್ತಿ, ಪೂರ್ವೋಕ್ತ, ಪು. ೯೦.

೩೬. ಅದೇ.

೩೭. ರಂಗನಾಥ, ಭಾರತ ಪ್ರಾದೇಶಿಕ ಮತ್ತು ಆರ್ಥಿಕ ಭೂಗೋಳಶಾಸ್ತ್ರ, ಪು. ೩೩೮.

೩೮. ಸ್ಪರ್ಧಾ ಸ್ಫೂರ್ತಿ, ಪೂರ್ವೋಕ್ತ, ಪು. ೮೯.

೩೯. ಮಹದೇವ ಸಿ. (ಸಂ), ೨೦೦೨; ಹೊಸಪೇಟೆ ತಾಲೂಕು ದರ್ಶನ, ಪು. ೩೫೧.

೪೦. ಪ್ರಜಾವಾಣಿ ಪತ್ರಿಕೆ, ಜೂನ್ ೨೦೧೦.

೪೧. ಭಾಸ್ಕರಪ್ಪ ಸಿ.ಎನ್.(ಸಂ), ೧೯೮೭; ತುಮಕೂರು ಜಿಲ್ಲೆ ದಾರ್ಶನ, ಪು. ೪೧೧.

೪೨. ಸಣ್ಣ ಮೀನುಗಾರಿಕೆ ಇಲಾಖೆಯ ವರದಿ, ತುರುವೇಕೆರೆ.

೪೩. ಭೈರಪ್ಪ ಕೆ., ೧೯೯೭; ತುರುವೇಕೆರೆ ತಾಲೂಕು ದರ್ಶನ, ಪು. ೧೨.

## ಅಧ್ಯಾಯ ೫

# ಕೆರೆ ಮತ್ತು ಸಾಂಸ್ಕೃತಿಕ ಆಚರಣೆಗಳು

ಪ್ರಾಚೀನ ಮತ್ತು ಮಧ್ಯಕಾಲೀನ ಯುಗದಲ್ಲಿ ನೀರಾವರಿ ಕಾರ್ಯಗಳ ನಿರ್ಮಾಣದಲ್ಲಿ ಕೆರೆಗಳು ಕೃಷಿ ಆರ್ಥಿಕಾಭಿವೃದ್ಧಿಗೆ ಪೂರಕವಾದರೂ ಧಾರ್ಮಿಕ ಮಹೋನ್ನತಿಯ ಉದ್ದೇಶಗಳು ಪ್ರಧಾನವಾಗಿದ್ದವು. ಕೆರೆ ಕಾಲುವೆಗಳನ್ನು ನಿರ್ಮಿಸುವುದು, ಒಡ್ಡುಗಳನ್ನು ಹಾಕುವುದು, ಧಾರ್ಮಿಕ ಕಾರ್ಯ ಇಂತಹ ಕಾರ್ಯಗಳಸ್ನು ಕೈಗೊಂಡ ವ್ಯಕ್ತಿ ಪುಣ್ಯಕ್ಕೆ ಅರ್ಹರಾಗುತ್ತಾರೆ ಎಂಬ ನಂಬಿಕೆ ಅಂದಿನಿಂದಲೂ ಜನರಲ್ಲಿ ಬೆಳೆದುಬಂದಿದೆ. ಆದುದರಿಂದ ಜನರು ಈ ಕೆಲಸದಲ್ಲಿ ತಮ್ಮನ್ನು ಸಕ್ರೀಯವಾಗಿ ತೊಡಗಿಸಿಕೊಳ್ಳುತ್ತಿದ್ದರು. ಈ ಕಾರಣಗಳಿಂದಾಗಿ ಧರ್ಮದ ಜಾಡಿನಡಿಯಲ್ಲಿ ಜನರು ನಡೆಯುತ್ತಿದ್ದು, ಅವರಿಗೆ ಅರಿವಿಲ್ಲದೆಯೇ ಕೆಲವು ಆಚರಣೆಗಳು ಅವರ ದೈನಂದಿನ ಜೀವನದಲ್ಲಿ ಸೇರಿಕೊಂಡಿವೆ. ಅಂದಿನ ಸಾಮಾಜಿಕ ಮತ್ತು ಧಾರ್ಮಿಕ ಜೀವನವನ್ನು ಗಮನಿಸಿದಾಗ ನಮಗೆ ತಿಳಿದುಬರುತ್ತದೆ. ತುರುವೇಕೆರೆ ಪರಿಸರದ ಕೆರೆಗಳನ್ನು ಕುರಿತಂತೆ ಕೆಲವು ಆಚರಣೆಗಳು ಇದ್ದವು. ಅಂತಪ ಕೆಲವು ಆಚರಣೆಗಳನ್ನು ಇಲ್ಲಿ ಚರ್ಚಿಸಲಾಗಿದೆ.

ಕೆರೆಗಳಿಗೆ ಸಂಬಂಧಿಸಿದಂತೆ ಪುರಾತನ ಸಂಖ್ಯಾಯನ ಗೃಹ್ಯ ಸೂತ್ರದಲ್ಲಿ ಬಾವಿ ಅಥವಾ ಕೆರೆಗಳನ್ನು ದೇವರಿಗೆ ಅರ್ಪಿಸಿದಂತೆ ಉಲ್ಲೇಖವಿದೆ. ಅಂದರೆ ಬಾವಿಯನ್ನು ಅಥವಾ ಕೊಳವನ್ನು ಬಳಸುವ ಮುನ್ನ ವೈದಿಕ ಆಚರಣೆಗಳನ್ನು ನಡೆಸಿ ಋಗ್ವೇದದ ಮಂತ್ರಗಳನ್ನು ಉಚ್ಚರಿಸಿ ಮಳೆಯ ಅಧಿದೇವತೆಯಾದ ವರುಣನನ್ನು ಮತ್ತು ಇತರೆ ದೇವತೆಗಳನ್ನು ಸ್ತುತಿಸಿದ ನಂತರದಲ್ಲಿಯೇ ಕೊಳ ಮತ್ತು ಬಾವಿಗಳನ್ನು ಉಪಯೋಗಿಸಬೇಕು ಎಂಬುದಾಗಿ ಈ ಗ್ರಂಥವು ತಿಳಿಸುತ್ತದೆ.[೧] ಮಹಾಭಾರತದ ಪ್ರಕಾರ ಯಾವ ವ್ಯಕ್ತಿಯು ಕಟ್ಟಿಸಿದ ಕೆರೆಯಲ್ಲಿ ಹಸುಗಳು,

ಪ್ರಾಣಿಗಳು, ಪಕ್ಷಿಗಳು, ಮನುಷ್ಯರು ನೀರನ್ನು ಕುಡಿದು ತೃಪ್ತರಾಗುವರೋ ಅವನು ಅಶ್ವಮೇಧಯಾಗದ ಫಲವನ್ನು ಪಡೆಯುತ್ತಾನೆ ಎಂಬುದಾಗಿ ಇದೆ.[೨] ಅದೇ ರೀತಿ ಅಗ್ನಿಪುರಾಣದ ೬೪ನೇ ಅಧ್ಯಾಯದಲ್ಲಿ ವರುಣ ದೇವನನ್ನು ಜಲ ದೇವನೆಂದೇ ವರ್ಣಿಸಲಾಗಿದೆ. ಅದರಂತೆ ಜಲಕ್ಕೆ ಸಂಬಂಧಿಸಿದ ಆಚರಣೆಗಳ ಬಗ್ಗೆ ಮಾಹಿತಿಗಳನ್ನು ನೀಡುತ್ತದೆ. ಅವುಗಳಲ್ಲಿ ಕೆರೆ, ಬಾವಿ, ಮುಂತಾದ ಜಲಕ್ಕೆ ಸಂಬಂಧಿಸಿದ ರಚನೆಗಳನ್ನು ಕೈಗೊಂಡಾಗ ಅಂತಹ ಸ್ಥಳದಲ್ಲಿ ಎಂಟು ಮಡಿಕೆಗಳಲ್ಲಿ ಎಂಟು ಬಗೆಯ ನೀರನ್ನು ತುಂಬಿಸಿ ಎಂಟು ದಿಕ್ಕುಗಳಲ್ಲಿ ಇಡಲಾಗುತ್ತದೆ. ಪೂರ್ವದಿಕ್ಕಿನ ಮಡಿಕೆಯಲ್ಲಿ ಸಮುದ್ರ ನೀರನ್ನು, ಆಗ್ನೇಯದಲ್ಲಿ ಗಂಗೆಯ ನೀರನ್ನು, ದಕ್ಷಿಣದಲ್ಲಿ ನದಿಯ ನೀರನ್ನು, ನೈರುತ್ಯದಲ್ಲಿ ಹಳ್ಳದ ನೀರನ್ನು, ಪಶ್ಚಿಮದಲ್ಲಿ ನದಿ ನೀರನ್ನು, ವಾಯುವ್ಯ ದಿಕ್ಕಿನಲ್ಲಿ ಪುರುಷ ನದಿಯ ನೀರನ್ನು, ಉತ್ತರದಲ್ಲಿ ಬಳ್ಳಿಗಳ ರಸ ಇಟ್ಟು, ಅಷ್ಟದಿಕ್ಪಾಲಕರುಗಳನ್ನು ಪೂಜಿಸಿ, ಅದರಲ್ಲಿ ಒಬ್ಬರಾದ ವರುಣ ದೇವರ ಪ್ರತಿಮೆಯನ್ನು ಊರಿನಲ್ಲಿ ಮೆರವಣಿಗೆ ಮಾಡಿ ನಂತರ ಬಾವಿಯಲ್ಲಿ ಅಥವಾ ಸರೋವರದಲ್ಲಿ ಮುಳುಗಿಸಬೇಕು. ಈ ರೀತಿ ಮಾಡಿದವರಿಗೆ ಅಶ್ವಮೇಧಯಾಗದ ಫಲಕ್ಕಿಂತಲೂ ಅಧಿಕ ಫಲ ದೊರೆಯುತ್ತದೆ ಎಂದು ತಿಳಿಸಿದೆ.[೩]

ಕೆರೆಗಳನ್ನು ಕಟ್ಟಲು ಅದನ್ನು ಬಳಸಿಕೊಳ್ಳಲು ಸಹ ಒಳ್ಳೆಯ ದಿನ ಮತ್ತು ಮೂಹರ್ತಗಳನ್ನು ನೋಡುತ್ತಿದ್ದರು. ಈ ವಿಷಯಕ್ಕೆ ಸಂಬಂಧಿಸಿದ ಎರಡು ಶಾಸನಗಳಲ್ಲಿ ಉದಾಹರಿಸಬಹುದಾಗಿದೆ. ಮೊದಲನೆಯ ಬುಕ್ಕರಾಯನ ಆಳ್ವಿಕೆ ಕಾಲದಲ್ಲಿನ (ಕ್ರಿ.ಶ. ೧೩೬೯) ಕಡಪ ಜಿಲ್ಲೆಯ ಪೋರುಮಾಮಿಲ್ಲಾ ಕೆರೆಯನ್ನು ರಾಜಕುಮಾರ ಭಾಸ್ಕರ ಭವದೂರ ನಿರ್ಮಿಸಿದನು. ಈ ಶಾಸನದಲ್ಲಿ ಕೆರೆಯನ್ನು ಕಟ್ಟಿದ ಶುಭಮೂಹರ್ತವನ್ನು ತಿಳಿಸಿದೆ. ಆ ದಿನದ ವಿವರಣೆಯೂ ಈ ರೀತಿಯಾಗಿದೆ. ಶಕವರ್ಷ ೧೨೯೧ರ ಸೌಮ್ಯ ಸಂವತ್ಸರ ಕಾರ್ತಿಕ ಶುದ್ಧ ೧೪ನೆಯ ದಿನ ಗುರುವಾರದ ಪುಷ್ಯ ನಕ್ಷತ್ರ ಕರ್ನಾಟಕ ಲಗ್ನದ ದಿನದಂದು ಎಲ್ಲಾ ಗ್ರಹಗಳು ಅನುಕೂಲಕರವಾಗಿರುವವೆಂದು ಈ ಕೆರೆಯನ್ನು ಕಟ್ಟಲಾಯಿತು ಎಂದು ಶಾಸನವು ಉಲ್ಲೇಖಿಸಿದೆ.[೪] ಎರಡನೇ ಶಾಸನವು ತುಮಕೂರು ಜಿಲ್ಲೆಯಲ್ಲಿ ಎರಡನೇ ಹರಿಹರನ ಕಾಲಕ್ಕೆ ಸಂಬಂಧಿಸಿದ್ದು, ಇದರಲ್ಲಿ ಕುಣಿಗಲ್ಲು ಕೆರೆಯ ತೂಬನ್ನು ಕ್ರಿ.ಶ. ೧೩೯೪ರಲ್ಲಿ ಮಂತ್ರಿವರ್ಯನಾದ ಇರುಗಪ್ಪ ಡಣನಾಯಕನು ಕಟ್ಟಿಸಿದನೆಂದು ಉಲ್ಲೇಖಿಸುತ್ತದೆ. ಈ ತೂಬಿನ ಕಲ್ಲನ್ನು ಪ್ರಶಕ್ತವಾದ ಶುಭಲಗ್ನದಲ್ಲಿ ಸ್ಥಾಪಿಸಲಾಯಿತು ಎಂದು ತಿಳಿಸುತ್ತಾ ಅವರ ವಿವರಗಳನ್ನು ಈ ರೀತಿಯಾಗಿ ನೀಡುತ್ತದೆ. ಶಕವರ್ಷ ೧೩೧೬ರ ಭಾವನಾಮ ಸಂವತ್ಸರದ ಭಾದ್ರಪದ ಶುಕ್ಲಪಕ್ಷದ ಮೊದಲ ದಿನದಂದು ಸೂರ್ಯೋದಯ ಏಳು ಘಟಕ ಸಂದ ನಂತರ ಧನುರ್ ಲಗ್ನದಲ್ಲಿ ತೂಬನ್ನು ಸ್ಥಾಪಿಸಲಾಯಿತು ಎಂದು ದಾಖಲಿಸಿದೆ.[೫] ಇಂತಹ ಯಾವುದೇ ಕಾರ್ಯದ ಆರಂಭದಲ್ಲಿ ಭೂಮಿ ಪೂಜೆ ಮಾಡುವಾಗ, ಬುನಾದಿ ಕಲ್ಲನ್ನು ಹಾಕುವಾಗ, ಮೊದಲ ಬಾರಿ ನೀರು ದೊರೆತಾಗ, ತೂಬುಗಳನ್ನು ನಿರ್ಮಿಸುವಾಗ, ಶಾಸನಗಳನ್ನು ನೆಡುವಾಗ ಈ ಮಾದರಿಯ ಪೂಜೆಗಳನ್ನು ಮಾಡುತ್ತಿದ್ದರು.

ಭಾರತದಲ್ಲಿನ ಜನರು ಧಾರ್ಮಿಕ ಸಮಾರಂಭಗಳಲ್ಲಿ ಪ್ರಾಣಿಗಳ ಬಲಿದಾನ ನೀಡುವ ಪದ್ಧತಿಯನ್ನು ಜಾರಿಯಲ್ಲಿರಿಸಿಕೊಂಡಿದ್ದರು. ಅದರಲ್ಲಿಯೂ ವಿಶೇಷವಾಗಿ ನೀರಾವರಿ ಕಾರ್ಯಗಳಲ್ಲಿ ಹೆಚ್ಚಾಗಿ ಕಂಡುಬಂದಿದೆ. ಏಕೆಂದರೆ ಕೆರೆ ಮತ್ತು ಬಾವಿಗಳು ಭೂತಗಳ ವಾಸಸ್ಥಾನವೆಂದು ಅವರ ಭಾವನೆಯಾಗಿತ್ತು. ಆದುದರಿಂದ ಯಾವುದೇ ಕೆರೆ ಹಾಗೂ ಬಾವಿಯಲ್ಲಿ ನೀರು ನಿಲ್ಲದೆ ಅಥವಾ ಪೂರ್ಣ ಪ್ರಮಾಣದ ನೀರು ದೊರೆಯದೆ ಹೋದಾಗ ಅದು ಭೂತಚೇಷ್ಟೆ ಎಂಬ ಕಲ್ಪನೆಯಿಂದ ಪ್ರಾಣಿ ಬಲಿ, ಕೆಲವು ಸಂದರ್ಭದಲ್ಲಿ ಮಾನವನನ್ನು ಹಾಗೂ ಎಳೆಯ ವಯಸ್ಸಿನ ಶಿಶುಗಳ ಬಲಿದಾನ ನೀಡುತ್ತಿದ್ದರು. ಈ ರೀತಿಯಾದ ವ್ಯವಸ್ಥೆಯೂ ಋಗ್ವೇದ ಮತ್ತು ಯಜುರ್ವೇದ ಕಾಲಘಟ್ಟದಲ್ಲಿ ಉಲ್ಲೇಖವಾಗಿದೆ. ಋಗ್ವೇದದಲ್ಲಿ ವರುಣದೇವನಿಗೆ ನರಬಲಿ ನೀಡಿದ ಒಂದು ಪ್ರಸಂಗವಿದ್ದರೆ, ಯಜುರ್ವೇದದಲ್ಲಿ ಕೋಟೆ ಕೊತ್ತಲು, ಊರಹೆಬ್ಬಾಗಿಲು ಮತ್ತು ಅಣೆಕಟ್ಟುಗಳನ್ನು (ಕೆರೆಗಳು ಸೇರಿದಂತೆ) ಕಟ್ಟುವಾಗ ನರಬಲಿಯನ್ನು ನೀಡಿ, ಬಲಿಯಾದ ವ್ಯಕ್ತಿಯ ದೇಹವನ್ನು ಅಂತಹ ಬುನಾದಿಗಳ ಅಡಿಪಾಯದಲ್ಲಿಯೇ ಹೂಳಬೇಕು ಎಂದು ತಿಳಿಸುತ್ತದೆ.[೬]

ಈ ನಂಬಿಕೆಗಳು ಮತ್ತು ಆಚರಣೆಗಳು ಜನಪದರಲ್ಲಿ ಇದ್ದವು. ಅವುಗಳು ಸಾಹಿತ್ಯ ರೂಪವನ್ನು ಪಡೆದು ಜನಪದ ಗೀತೆಗಳಾಗಿ ಇಂದಿಗೂ ಉಳಿದುಬಂದಿವೆ. ಕನ್ನಡ ಜನಪದ ಸಾಹಿತ್ಯದಲ್ಲಿ ಉದಾಹರಿಸಲಾಗಿದೆ. ಕಲ್ಲನ ಕೇರಿಯಲ್ಲಿ ಮಲ್ಲಣ್ಣ ಗೌಡನೆಂಬವನು ಒಂದು ಕೆರೆ ಕಟ್ಟಿಸಿದ. ಆದರೆ ಆ ಕೆರೆಯ ಒಡ್ಡು (ಏರಿ) ನಿಲ್ಲದೇ ಹೋದಾಗ, ಒಬ್ಬ ಜ್ಯೋತಿಷಿಯನ್ನು ಕೇಳಿದರು. ಅವನು ಕೆರೆಯು ಮಾನವನ (ನರ) ಬಲಿ ಬೇಡುತ್ತಿದೆ ಎಂದು ತಿಳಿಸುತ್ತಾನೆ. ಈ ಕಾರ್ಯಕ್ಕೆ ಊರ ಜನರು ಯಾರೂ ಮುಂದೆ ಬರುವುದಿಲ್ಲ. ಆಗ ಸಾರ್ವಜನಿಕ ಹಿತರಕ್ಷಣೆಯನ್ನು ಗಮನದಲ್ಲಿರಿಸಿಕೊಂಡು ಮಲ್ಲನಗೌಡ ಕಿರಿಯ ಸೊಸೆ ಭಾಗೀರಥಿ ಕೆರೆಗೆ ಆಹುತಿಯಾಗುತ್ತಾಳೆ. ನಂತರ ಕೆರೆ ಏರಿಯೂ ಭದ್ರವಾಗಿ ನಿಲ್ಲುತ್ತದೆ. ಜನರು ಆಹುತಿಯಾದ ಭಾಗೀರಥಿಗೆ ಒಂದು ಚಿಕ್ಕ ಗುಡಿಯನ್ನು ಕೆರೆಯ ಸಮೀಪದಲ್ಲಿ ಕಟ್ಟಿ ಅವಳ ಮೂರ್ತಿಯನ್ನು ಸ್ಥಾಪಿಸಿ ಪೂಜಿಸುತ್ತಾರೆ ಎಂಬುದು ಜನಪದ ಸಾಹಿತ್ಯದಿಂದ ತಿಳಿದುಬರುತ್ತದೆ.[೭]

ಈ ರೀತಿಯಾದ ಕಥೆಗಳು ಮತ್ತು ಸಾಂಸ್ಕೃತಿಕ ಆಚರಣೆಗಳು, ತುರುವೇಕೆರೆ ಪರಿಸರದ ಕೆಲವು ಕಡೆ ಪ್ರಚಲಿತದಲ್ಲಿವೆ. ಹಾಗಲವಾಡಿ ನಾಯಕರಾದ ಸಾಲನಾಯಕನ ತಮ್ಮಂದಿರಾದ ಚಿಕ್ಕನಾಯಕ ಮತ್ತು ಅಣ್ಣೇನಾಯಕ ತುರುವೇಕೆರೆಯಲ್ಲಿ ಕೆರೆಯನ್ನು ವಿಸ್ತರಿಸಿ ಅಭಿವೃದ್ಧಿ ಪಡಿಸಿದರು. ಅವರ ಕಾಲದಲ್ಲಿ ಕೆರೆಗೆ ನೀರು ಬರಲು ನರಬಲಿ ಕೊಡುವ ಪದ್ಧತಿ ಇತ್ತು. ಇಂತಹ ಪ್ರಸಂಗ ಚಿಕ್ಕನಾಯಕನಹಳ್ಳಿ ತಾಲೂಕಿನ ಹುಳಿಯಾರ್ ಕೆರೆಯ ಬಗೆಗೆ ಇದೆ. ಆಲೂರಿನ ಕೆರೆ ಏರಿ ಒಡೆಯದೆ ನಿಲ್ಲಲು ಊರಿನ ಮುಖಂಡ ತನ್ನ ಸೊಸೆ ಕೆಂಚಮ್ಮನನ್ನು ಬಲಿಕೊಟ್ಟನು ಎಂಬುದು ಅಲ್ಲಿನ ಜನಪದ ಗೀತೆಯ ಸಾರಾಂಶವಾಗಿದೆ.[೮] ತುರುವೇಕೆರೆ

ನಗರದಲ್ಲಿ ಗಣೇಶ ಚತುರ್ಥಿ ಹಬ್ಬದಂದು ಗಣೇಶನನ್ನು ತಂದು ೨೦ ದಿನಗಳವರೆಗೆ ಪೂಜಿಸಿ ಕೊನೆಯ ದಿನದಂದು ಅತ್ಯಂತ ವಿಜೃಂಭಣೆಯಿಂದ ಮೆರವಣಿಗೆ ಮಾಡಿಕೊಂಡು ಈ ನಗರದ ಕೆರೆಯಲ್ಲಿ ಗಣೇಶನ ಮೂರ್ತಿಯನ್ನು ವಿಸರ್ಜನೆ ಮಾಡುತ್ತಿದ್ದರು. ಇಂದಿಗೂ ಕೂಡ ಆ ಆಚರಣೆಯೂ ಜಾರಿಯಲ್ಲಿದೆ. ಅಲ್ಲದೆ ಕೆರೆಯ ಪಕ್ಕದಲ್ಲಿ ಉಡುಸಲಮ್ಮ ದೇವಸ್ಥಾನವಿದ್ದು, ಇದರ ಜಾತ್ರೆಯು ಮಾರ್ಚ್ ತಿಂಗಳಿನಲ್ಲಿ ಏಳು ದಿನಗಳವರೆಗೆ ನಡೆಯುತ್ತದೆ. ತಾಲೂಕಿನ ಮಾಯಸಂದ್ರ ಕೆರೆ ಏರಿ ಮಧ್ಯದಲ್ಲಿ ಮಾಯಮ್ಮನ ಚಿಕ್ಕ ಗುಡಿ ಅಥವಾ ದೇವಸ್ಥಾನವಿದೆ. ಕೆರೆಗೆ ಗಂಗಮ್ಮನ ಪೂಜೆ ಮಾಡಲು ಬರುವ ಜನರು ಮಾಯಮ್ಮ ದೇವಿಗೆ ಅರಸಿನ ಕುಂಕುಮ ಇಟ್ಟು ಪೂಜೆ ಮಾಡುವ ಪದ್ಧತಿ ಬೆಳೆದುಬಂದಿದೆ. ಹಾಗೂ ಕೆರೆಯ ಪಕ್ಕದಲ್ಲಿ ಊರಿನ ಮೂಲ ದೇವರಾದ ಕೊಲ್ಲಪುರದಮ್ಮನ ದೇವಸ್ಥಾನವಿದೆ. ಈ ದೇವರ ಪೂಜೆಗೆ ಕೆರೆಯ ನೀರನ್ನು ಬಳಸಿಕೊಳ್ಳುತ್ತಾರೆ. ಹಿಂದೆ ಅರಸರು ತಮ್ಮ ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳಲು ದೇವಾಲಯಗಳನ್ನು ನಿರ್ಮಿಸುತ್ತಿದ್ದರು. ಆ ದೇವಾಲಯದ ಮುಂದೆ ಅಥವಾ ಎದುರಿಗೆ ದೇವರ ಮೂರ್ತಿಗಳನ್ನು ಪೂಜಿಸಲು ನೀರಿನ ಅವಶ್ಯಕತೆಯಿಂದಾಗಿ ಕೆರೆಗಳನ್ನು ನಿರ್ಮಿಸಿದರೆಂದು ಶಾಸನಗಳಿಂದ ತಿಳಿದುಬರುತ್ತದೆ. ಮೇಲಿನ ವಾಕ್ಯವು ಈ ಶಾಸನಕ್ಕೆ ಉತ್ತಮ ನಿದರ್ಶನವಾಗಿದೆ ಎನ್ನಬಹುದು.

ಮಲ್ಲಾಘಟ್ಟಾ ಕೆರೆಗೆ ಮೊದಲು ಮಳೆ ನೀರು ಸಂಗ್ರಹವಾಗುತ್ತಿತ್ತು. ಅಧಿಕವಾದ ಮಳೆ ಬಂದರೂ ಕೂಡ ಈ ಕೆರೆಯು ಕೋಡಿ ಬೀಳುತ್ತಿರಲಿಲ್ಲ. ಕೆರೆಯ ಅಕ್ಕ ತಂಗಿಯರಾದ ಹಣತಿ ಮತ್ತು ಕೆಂಬಾಳ್ ಕೆರೆಯ ನೀರನ್ನು ತಂದು ಹಾಕಿದರೆ ಕೆರೆಯು ಕೋಡಿ ಬೀಳುತ್ತದೆ ಎಂಬ ನಂಬಿಕೆ ಇತ್ತು. ಇಂದು ಹೇಮಾವತಿ ನಾಲೆಯ ನೀರು ಕೆರೆಗೆ ಹರಿದುಬರುವುದರಿಂದ ಇಂತಹ ನಂಬಿಕೆಗಳು ಅಸ್ತಿತ್ವದದಲ್ಲಿ ಇಲ್ಲ ಎನ್ನಬಹುದು. ಮಲ್ಲಾಘಟ್ಟ ಕೆರೆಯ ಪಕ್ಕದ ಗ್ರಾಮಗಳಲ್ಲಿ ಮಳೆ ಬಾರದೆ ಹೋದರೆ ಕಂಗಾಲಾದ ರೈತರು ಕೆಲವು ಆಚರಣೆಗಳನ್ನು ಮಾಡುತ್ತಿದ್ದರು. ಆ ಊರಿನ ಹುಡುಗರೆಲ್ಲರು ಸೇರಿ ಜೇಡಿ ಮಣ್ಣಿನಿಂದ ಮಳೆರಾಯನ ವಿಗ್ರಹವನ್ನು ಮಾಡಿ, ಅದನ್ನು ಪಲಿಗೆ ಮೇಲಿಟ್ಟು ಅರಿಶಿನ ಕುಂಕುಮವಿಟ್ಟು ಕಣಗಲೆ, ಮುತ್ತುಗ, ಮಲ್ಲಿಗೆ ಮುಂತಾದ ಹೂವುಗಳಿಂದ ಅಲಂಕರಿಸಿ ಪೂಜೆ ಮಾಡುತ್ತಾರೆ. ಬೆತ್ತಲೆ ಇರುವ ಓರ್ವ ಬಾಲಕನು ಮಳೆರಾಯನ ವಿಗ್ರಹವನ್ನು ಹೊತ್ತುಕೊಳ್ಳುತ್ತಾನೆ. ಇವನ ಹಣೆಗೂ ಅರಿಶಿನ ಕುಂಕುಮ ಹಚ್ಚಿ ಕೊರಳಿಗೆ ಹೂ ಮಾಲೆಯನ್ನು ಹಾಕಿರುತ್ತಾರೆ. ಹೀಗೆ ಹೆಚ್ಚಿನ ಸಂಖ್ಯೆಯಲ್ಲಿ ಹುಡುಗರೆಲ್ಲರೂ ಸೇರಿಕೊಂಡು ವಿವಿಧ ಹಾಡುಗಳನ್ನು ಹಾಡುತ್ತಾರೆ. ಮಳೆರಾಯನ ವಿಗ್ರಹವನ್ನು ಹೊತ್ತ ಬಾಲಕನ ಜೊತೆಯಲ್ಲಿ ಮನೆ ಮನೆ ಬಾಗಿಲಿಗೆ ಹೋಗುತ್ತಾರೆ. ಪ್ರತಿಯೊಂದು ಮನೆ ಬಾಗಿಲಿಗೆ ಹೋದಾಗಲೂ ಮನೆಯ ಹೆಂಗಸರು ಮಳೆರಾಯನ ವಿಗ್ರಹ ಹೊತ್ತ ಹುಡುಗನ ತಲೆ ಮೇಲೆ

ನೀರನ್ನು ಚುಮುಕಿಸಿ ಕಾಲಿನ ಮೇಲೆ ಒಂದೊಂದು ಕೊಡ ತಣ್ಣೀರನ್ನು ಸುರಿಯುತ್ತಾರೆ. ನಂತರ ವಿಗ್ರಹವನ್ನು ಅರಿಶಿನ ಕುಂಕುಮ ಹಚ್ಚಿ ಹೂವಿನ ಗರುಡಗಂಬಕ್ಕೆ ಎಣ್ಣೆ ಹಾಕಿ ಪೂಜೆ ಮಾಡಿ ದವಸ ಧಾನ್ಯ ಅಥವಾ ಹಣದ ರೂಪದ ಕಾಣಿಕೆಯನ್ನು ನೀಡುತ್ತಾರೆ.

ಹೂಯ್ಯ ಹೂಯ್ಯ ಮಳೆರಾಯ
ಹೂವಿನ ತೋಟಕ್ಕೆ ನೀರಿಲ್ಲ
ಹೂಯ್ಯ ಹೂಯ್ಯ ಮಳೆರಾಯ
ಬಾಳೇ ತೋಟಕೆ ನೀರಿಲ್ಲ
ಹೂಯ್ಯ ಹೂಯ್ಯ ಮಳೆರಾಯ
ತೆಂಗಿನ ತೋಟಕ್ಕೆ ನೀರಿಲ್ಲ......

ಹೀಗೆ ಊರನ್ನೆಲ್ಲಾ ಸುತ್ತಿದ ಬಳಿಕ ಸಂಗ್ರಹಿಸಿದ ದವಸ ಧಾನ್ಯವನ್ನೆಲ್ಲಾ ಮಾರಾಟ ಮಾಡಿ ಬಂದ ಹಣದಿಂದ ಪುರಿ, ಬೆಲ್ಲ, ಕಾಯಿ, ಬಾಳೆಹಣ್ಣು, ಕರ್ಪೂರ, ಮತ್ತು ಊದುಬತ್ತಿಗಳನ್ನು ತಂದು ಊರ ಹೊರಗಿನ ಕೆರೆ ಹತ್ತಿರ ಹೋಗಿ ಮಳೆರಾಯನಿಗೆ ಪೂಜೆ ಮಾಡಿ ಬಂದವರಿಗೆಲ್ಲಿ 'ಚರ್ಪು' ಹಂಚಿ ಕೆರೆಯಲ್ಲಿ ಮಳೆರಾಯನನ್ನು ಬಿಟ್ಟುಬರುತ್ತಾರೆ.[F] ಇಂತಹ ಆಚರಣೆಯು ಮಲ್ಲಾಘಟ್ಟ ಕೆರೆಯಲ್ಲಿ ಹಿಂದಿನಿಂದಲೂ ನಡೆಯುತ್ತಿದ್ದು, ಇಂದು ಇಲ್ಲದಂತಾಗಿದೆ. ತುರುವೇಕೆರೆ ಪರಿಸರದ ಇನ್ನಿತರ ಕೆಲವು ಗ್ರಾಮಗಳಲ್ಲಿ ಈ ಆಚರಣೆಗಳು ಇಂದಿಗೂ ಅಸ್ತಿತ್ವದಲ್ಲಿವೆ.

ಕೆರೆಯ ಉತ್ತರ ದಿಕ್ಕಿಗೆ ಗಂಗಾಧರೇಶ್ವರ ದೇವಸ್ಥಾನವಿದೆ. ಇದರ ಜಾತ್ರೆಯೂ ಶಿವರಾತ್ರಿ ಹಬ್ಬವಾದ ೯ ದಿನದ ನಂತರ ನಡೆಯುತ್ತದೆ. ಈ ಜಾತ್ರೆಯಲ್ಲಿ ಅಧಿಕ ಸಂಖ್ಯೆಯ ಜಾನುವಾರುಗಳು ಸೇರುತ್ತಿದ್ದವು. ಪ್ರಸ್ತುತ ದಿನಗಳಲ್ಲಿ ಜಾತ್ರೆಯು ನಡೆಯುತ್ತದೆ. ಆದರೆ ಯಾವುದೇ ಜಾನುವಾರುಗಳು ಕಂಡುಬರುವುದಿಲ್ಲ. ದೇವಾಲಯದ ಮುಂಭಾಗದಲ್ಲಿ ಮಂಗಳವಾರ ಮತ್ತು ಶುಕ್ರವಾರ ವಿಶೇಷವಾಗಿ ಗಂಗಮ್ಮನ ಪೂಜೆ ಮಾಡುತ್ತಾರೆ. ಮಕ್ಕಳ ಫಲ ಇಲ್ಲದೆ ಇದ್ದಂತಹ ಸ್ತ್ರೀಯರು ಇಂತಹ ಪೂಜೆಯನ್ನು ನಡೆಸುತ್ತಾರೆ. ಇದು ಕೇವಲ ಕೆಲವೆ ವರ್ಗಕ್ಕೆ ಸೀಮಿತವಾಗಿರದೆ ಎಲ್ಲಾ ಜನಾಂಗದವರಿಗೂ ಸೇರಿದೆ. ಈ ಆಚರಣೆಯನ್ನು ಮುತ್ತೈದೆಯರು ಕೆರೆಯ ದಡದಲ್ಲಿ ಮೂರು ಕೊಡದಲ್ಲಿ ನೀರನ್ನು ತುಂಬಿ ಇಟ್ಟು, ಹೂವು, ಅರಿಶಿನ ಮತ್ತು ಕುಂಕುಮದಿಂದ ಪೂಜೆ ಮಾಡುತ್ತಾರೆ. ಬಾಳೆ ಅಥವಾ ಮುತ್ತುಗದ ಎಲೆ ಮೇಲೆ ಗೋಧಿ ಹಿಟ್ಟಿನ ಹಣತಿ ಮಾಡಿ ನೀರಿನಲ್ಲಿ ತೇಲಿ ಬಿಟ್ಟು ನಂತರ ತಂಬಿಟ್ಟಿನ ಆರತಿ ಮಾಡುತ್ತಾರೆ. ಈ ನೈವೇದ್ಯವನ್ನು ಕೆರೆಯಲ್ಲಿ ಗಂಗಮ್ಮ ಮಾಡುವ ಸ್ತ್ರೀಯರನ್ನು ಹೊರತು ಪಡಿಸಿ, ಉಳಿದ ಸ್ತ್ರೀಯರು ತಿಂದರೆ ಅವರು ಈ ಕೆರೆಗೆ ಬಂದು ಪೂಜೆ ಸಲ್ಲಿಸಬೇಕಾಗುತ್ತದೆ ಎಂಬ ನಂಬಿಕೆ ಇದೆ. ಅಲ್ಲದೆ ಋತುಮತಿಯರಾದ

ಸ್ತ್ರೀಯರು ತಾವು ಮುಟ್ಟಾದ ದಿನಗಳಲ್ಲಿ ಈ ಕೆರೆಯ ಹತ್ತಿರ ಬರುತ್ತಿಲಿಲ್ಲ. ಕೆರೆಯು ತುಂಬಿ ಕೋಡಿ ಬಿದ್ದಾಗ ನೀರ್ಗಂಟಿಗಳು ಮತ್ತು ಊರಿನ ಜನಪದರು ಸೇರಿ ಬಾಗಿನ ಅರ್ಪಣೆ ಮಾಡುತ್ತಿದ್ದರು. ಇಂದು ನೀರಾವರಿ ಇಲಾಖೆಯು ಕೆರೆಯ ನಿರ್ವಹಣೆ ಮಾಡುತ್ತಿರುವುದರಿಂದ ಇಂತಹ ಆಚರಣೆಗಳು ಈ ಕೆರೆಯಲ್ಲಿ ನಡೆಯುತ್ತಿಲ್ಲ.

ಕೆರೆಗೆ ಪಂಚಕನ್ಯೆಯರು, ಅಪ್ಸರಾಸ್ತ್ರೀಯರು, ದೇವಾನುದೇವತೆಗಳು ಜಲವಿಹಾರಕ್ಕಾಗಿ ಆಗಮಿಸುತ್ತಾರೆ. ಆದ್ದರಿಂದ ಇದು ಪವಿತ್ರವಾದುದ್ದೆಂಬ ಭಾವನೆ ಇದೆ. ಹಾಗಾಗಿ ಈ ಕೆರೆಗೆ ಸುತ್ತಮುತ್ತಲಿನ ಗ್ರಾಮದ ಗ್ರಾಮ ದೇವತೆಗಳು ಶಿವರಾತ್ರಿಯಿಂದ ಪ್ರಾರಂಭ ಮಾಡಿ, ಯುಗಾದಿಯವರೆಗೆ ಗಂಗಾಸ್ನಾನಕ್ಕೆ ಆಗಮಿಸುತ್ತವೆ. ಕೆಲವು ಗ್ರಾಮದ ದೇವತೆಗಳು ಶ್ರವಣ ಮತ್ತು ಕಾರ್ತಿಕ ಮಾಸದಲ್ಲಿ ಬರುತ್ತವೆ. ಇಲ್ಲಿಗೆ ಗ್ರಾಮದೇವತೆಗಳನ್ನು ಅರ್ಚಕವೃಂದ ಮತ್ತು ದೇವತೆಗಳ ಆರಾಧಕರು ಭಕ್ತಿ ಭಾವದಿಂದ ಕರೆತಂದು ಅವುಗಳಿಗೆ ಅವಭೃತ ಸ್ನಾನ ಮಾಡಿಸುತ್ತಾರೆ. ಹಾಗೂ ಅವುಗಳ ಪೂಜಾ ಸಾಮಗ್ರಿಗಳನ್ನು ಮತ್ತು ಅಲಂಕರಣ ಸಾಮಗ್ರಿಗಳನ್ನು ತೊಳೆಯುತ್ತಾರೆ. ಅನಂತರ ಪುರೋಹಿತರು ದೇವತೆಗಳಿಗೆ ಪುಣ್ಯಾಹವನ್ನು ಮಾಡಿಸಿ, ಗೋವಿನ ಗಂಜಲದಿಂದ ಶುದ್ಧೀಕರಿಸುತ್ತಾರೆ. ಈ ರೀತಿ ಕಾರ್ಯ ಮಾಡಿದ ಮೇಲೆ ಕುಂಭದ ಅಭಿಷೇಕ ಮಾಡಿ ಅಲಂಕಾರ ಮಾಡುತ್ತಾರೆ. ಅಭಿಷೇಕಕ್ಕೆ ಕೊನೆಯಲ್ಲಿ ಅಷ್ಟ ಗಂಧವನ್ನು ಬಳಸುತ್ತಾರೆ. ಹೀಗೆ ಅವಭೃತ ಸ್ನಾನ ಮಾಡಿಸಿದ ದೇವರಿಗೆ, ಷೋಡಶೋಪಚಾರ, ಪೂಜೆ, ನಂತರ ಗಣಪತಿ ಹೋಮ, ನವಗ್ರಹ ಹೋಮ ಹಾಗೂ ಪ್ರತಿ ಗ್ರಾಮ ದೇವತೆಯ ಹೆಸರಿನಲ್ಲಿ ಹೋಮ ಮಾಡಲಾಗುತ್ತದೆ. ಶ್ರೀ ದೇವತೆಗಳಿಗೆ ಶಕ್ತಿ ದೇವತೆಯ ಮೂಲಕ, ವಿಷ್ಣು ಸಂಬಂಧಿ ದೇವತೆಗಳಿಗೆ ವಿಷ್ಣು ಸಂಬಂಧಿ ಸ್ತುತಿಗಳಿಂದ ಹೋಮ ಮಾಡಿ, ಕಳಾಕರ್ಷಣೆ ಮಾಡಿ ರಕ್ಷೆಯನ್ನು ಕೊಡಲಾಗುತ್ತದೆ. ಈ ಕ್ರಿಯೆಯನ್ನು ಆನೆಕೆರೆಯ ಪುರೋಹಿತರು ನೆರವೇರಿಸುತ್ತಾರೆ. ದೇವರಿಗೆ ಅಭಿಷೇಕ ಪೂಜೆ, ಹೋಮಗಳಾದ ಮೇಲೆ ನೈವೇಧ್ಯ ರೂಪದಲ್ಲಿ ಕಡಲೆಕಾಳು, ಬಾಳೆ ಹಣ್ಣಿನ ರಾಸಾಯನ, ಸೌತೆಕಾಯಿ ಮತ್ತು ತಂಬಿಟ್ಟನ್ನು ಸಮರ್ಪಿಸುತ್ತಾರೆ. ತರುವಾಯ ದೇವರುಗಳು ರಕ್ಷೆಯೊಂದಿಗೆ ಸ್ವಗ್ರಾಮಕ್ಕೆ ತೆರಳುತ್ತವೆ. ಪ್ರಸ್ತುತ ಕ್ಷೇತ್ರ ಕಾರ್ಯವನ್ನು ಕೈಗೊಂಡ ಸಂದರ್ಭದಲ್ಲಿ ಕಣತೊರಮ್ಮ, ಕನ್ನುಂಘಟ್ಟದ ರಂಗನಾಥ ಸ್ವಾಮಿ ಮತ್ತು ಬಸ್ತಿಹಳ್ಳಿಯಮ್ಮ ಗ್ರಾಮ ದೇವರುಗಳು ಗಂಗಾ ಸ್ನಾನಕ್ಕೆ ಈ ಕೆರೆಗೆ ಆಗಮಿಸಿದ್ದವು. ಇದರಿಂದ ಗಂಗಾ ಸ್ನಾನದ ಎಲ್ಲ ಕಾರ್ಯ ವಿಧಿ ವಿಧಾನಗಳು ಕಣತೂರು ಗ್ರಾಮ ಪುರೋಹಿತರು, ಸ್ಥಳೀಯ ಜನಪದರು ಮತ್ತು ಗಂಗಾಧರೇಶ್ವರ ದೇವಸ್ಥಾನದ ಅರ್ಚಕರಿಂದ ತಿಳಿದುಬಂದಿದೆ.[೧೦] ಕೆರೆಯಲ್ಲಿ ದೇವ ಕನ್ಯೆಯರು ವಾಸವಾಗಿದ್ದಾರೆ ಎಂಬ ನಂಬಿಕೆ ಇದೆ. ಇದರಿಂದ ಕೆರೆಯ ದಡದಲ್ಲಿ ಮಣ್ಣಿನಿಂದ ಮಾಡಿದ ದೇವಕನ್ಯೆಯರ ಪ್ರತಿಬಿಂಬಗಳಿವೆ. ಇಂದು ಕೆರೆ ಮತ್ತು ಗಂಗಾಧರೇಶ್ವರ ದೇವಾಲಯದ ಮುಂಭಾಗದಲ್ಲಿಬ್ರಾಹ್ಮಣ ವರ್ಗದವರು ಹೋಮ ನಡೆಸುತ್ತಾರೆ.

ಇಂದು ಸಂಪಿಗೆ ಕೆರೆಯಲ್ಲಿಯೂ ಕೂಡ ಗಂಗಮ್ಮನ ಪೂಜೆ ನಡೆಯುತ್ತಿದೆ. ಈ ಕೆರೆಯ ಪತ್ತಿರ ನಾಗರ ಕಲ್ಲುಗಳನ್ನು ಹಾಕಿ ಹೋದರೆ, ನಾಗರ ದೋಷ ಪರಿಹಾರ ಆಗುತ್ತದೆ ಎಂಬ ನಂಬಿಕೆ ಇದೆ. ಇದಕ್ಕೆ ಸಂಬಂಧಿಸಿದಂತೆ ಕೆರೆ ಹತ್ತಿರ ಹೆಚ್ಚಿನ ಸಂಖ್ಯೆಯಲ್ಲಿ ನಾಗರ ಕಲ್ಲುಗಳಿವೆ. ಈ ಗ್ರಾಮದಲ್ಲಿ ಗೌರಮ್ಮನ ದೇವಸ್ಥಾನವಿದೆ. ಗೌರಿ ಹಬ್ಬದ ದಿನ ಮೈದಾ ಹಿಟ್ಟಿನಿಂದ ಬೃಹತ್ ಗಾತ್ರದ ಗೌರಮ್ಮನನ್ನು ಮಾಡಿ, ವಿವಿಧ ರೀತಿಯ ಪೂಜೆ ಸಲ್ಲಿಸುತ್ತಿದ್ದರು. ಇದನ್ನು ಗಣೇಶ ಚತುರ್ಥಿ ಆದ ಒಂಬತ್ತು ದಿನದ ನಂತರ ಈ ಕೆರೆಯಲ್ಲಿ ವಿಸರ್ಜನೆ ಮಾಡುತ್ತಾರೆ. ಕೆರೆಯ ಉತ್ತರ ದಿಕ್ಕಿನಲ್ಲಿ ಮಲ್ಲಿಕಾರ್ಜುನ ದೇವಾಲಯವಿದೆ. ಇದರ ಮುಂಭಾಗದಲ್ಲಿ ಪ್ರತಿ ವರ್ಷ ಪರವನ್ನು ಮಾಡುತ್ತಾರೆ. ಇದಕ್ಕಾಗಿ ಗ್ರಾಮದ ಎಲ್ಲಾ ಮನೆಗಳಿಂದ ಆಹಾರ ಧಾನ್ಯಗಳನ್ನು ಸಂಗ್ರಹಿಸುತ್ತಾರೆ. ಈ ರೀತಿಯಾಗಿ ಸಂಗ್ರಹಿಸಿದ ಆಹಾರ ಧಾನ್ಯಗಳಿಂದ ಅನ್ನ, ಮುದ್ದೆ ಮತ್ತು ಪಾಯಸಗಳನ್ನು ಮಾಡಿ ದೇವರಿಗೆ ಸಮರ್ಪಿಸುತ್ತಿದ್ದರು. ನಂತರ ಊರಿನ ಎಲ್ಲಾ ಜನರು ಒಟ್ಟಿಗೆ ಸೇರಿ ಊಟ ಮಾಡುತ್ತಿದ್ದರು. ಇಂತಹ ಆಚರಣೆಗಳು ತುರುವೇಕೆರೆ ಪರಿಸರದ ಸಾರಿಗೆಹಳ್ಳಿ, ಮಾಯಸಂದ್ರ, ಜಡೆಯ ಮುಂತಾದ ಕೆರೆಗಳ ಬಳಿ ಆಚರಣೆಯಲ್ಲಿದೆ.

ಸೂಳೆಕೆರೆ ಗ್ರಾಮದಲ್ಲಿ ಮೂರು ದಿನಗಳ ಜಾತ್ರೆ ನಡೆಯುತ್ತದೆ. ಕೆರೆಯ ಉತ್ತರಕ್ಕೆ ದೊಡ್ಡಮ್ಮನ ದೇವಸ್ಥಾನ ಮತ್ತು ಗ್ರಾಮದ ಕೊನೆಯಲ್ಲಿ ವೀರಭದ್ರಸ್ವಾಮಿ ದೇವಸ್ಥಾನವಿದೆ. ಜಾತ್ರೆಯ ಮೊದಲನೆ ದಿನ ವೀರಭದ್ರಸ್ವಾಮಿ ಈ ಕೆರೆಗೆ ಗಂಗಾಸ್ನಾನಕ್ಕೆ ಹೋಗುತ್ತದೆ. ಕೆರೆಯ ಆಯಕಟ್ಟು ಪ್ರದೇಶದಲ್ಲಿ ಸೂಳೆಕಲ್ಲಮ್ಮ ಎಂಬ ಹೆಸರಿನ ಒಂದು ವೀರಗಲ್ಲು ಇದೆ. ಈ ಜಾತ್ರೆಯ ದಿನ ಊರಿನ ಗ್ರಾಮಸ್ಥರೆಲ್ಲ ಸೇರಿ ೧೦೧ ಕೊಡ ಕೆರೆಯ ನೀರನ್ನು ತಂದು ಸ್ನಾನ ಮಾಡಿಸುತ್ತಾರೆ. ನಂತರ ಹೂವು, ಅರಿಶಿನ, ಕುಂಕುಮ ಮತ್ತು ತಂಬಿಟ್ಟಿನ ಆರತಿ ಸಮರ್ಪಿಸುತ್ತಾರೆ. ವರ್ಷದ ಒಂದು ನಿರ್ದಿಷ್ಟ ಜಾತ್ರೆಯೆಂದು ಪೂಜೆ ಮಾಡುವ ಸಂಪ್ರದಾಯ ಇದೆ. ಕೆಲವೊಮ್ಮೆ ಊರಿನಲ್ಲಿ ಅತಿವೃಷ್ಟಿ ನೈಸರ್ಗಿಕ ವಿಕೋಪಗಳು ಕಾಣಿಸಿಕೊಂಡರೆ ಈ ರೀತಿಯ ಆರತಿ ಸೇವೆ ಮಾಡುತ್ತಾರೆ. ಗ್ರಾಮದಲ್ಲಿ ಈ ವೀರಗಲ್ಲಿಗೆ ಆರತಿ ಮಾಡಿ ಮನೆಗೆ ಹಿಂದಿರುಗುವುದರ ಒಳಗೆ ಮಳೆ ಬರುತ್ತದೆ ಎಂಬ ನಂಬಿಕೆ ಇದೆ. ಈ ಆಚರಣೆಯೂ ಸೂಳೆಕೆರೆ ಗ್ರಾಮದಲ್ಲಿ ಅಂದಿನಿಂದಲೂ ಬೆಳೆದುಬಂದಿದೆ.

ಮಾವಿನ ಕೆರೆ ಏರಿ ಹಿಂಭಾಗದಲ್ಲಿ ಮಾವಿನ ಕೆರೆಯಮ್ಮ ದೇವಸ್ಥಾನವಿದೆ. ಈ ಗ್ರಾಮದಲ್ಲಿ ನಾಗರ ಹಬ್ಬದ ದಿನ ಮೊದಲು ಕೆರೆಗೆ ನೈವೇದ್ಯ ಮಾಡಿ ನಂತರ ನಾಗರ ಕಲ್ಲಿಗೆ ಸಮರ್ಪಿಸುತ್ತಾರೆ. ಕೆರೆಯ ಒಳಭಾಗದಲ್ಲಿ ಮಾಸ್ತಮ್ಮ ದೇವಿಯ ಚಿಕ್ಕ ಗುಡಿ (ದೇವಸ್ಥಾನ) ಇದೆ. ಈ ದೇವಿಗೆ ಅರಿಶಿನ, ಕುಂಕುಮ, ಹೂವು, ಸೀರೆ ಮತ್ತು ಬಳೆಗಳನ್ನು ಇಟ್ಟು ಪೂಜೆ ಮಾಡುತ್ತಾರೆ. ಇಂತಹ ಆಚರಣೆಯನ್ನು ಈ ಊರಿನ ಜನಪದರು ತಮ್ಮ ಸಂದರ್ಭಕ್ಕೆ ಅನುಸಾರವಾಗಿ (ವರ್ಷಕ್ಕೆ ಒಂದು ಸಾರಿ) ನಡೆಸುತ್ತಾರೆ.

ನೀರಗುಂದ ಕೆರೆಯ ಪಕ್ಕದಲ್ಲಿ ಕಾಲಭೈರವೇಶ್ವರ ದೇವಸ್ಥಾನವಿದೆ. ಈ ದೇವಾಲಯದ ಪುನರ್ ನಿರ್ಮಾಣ ಮಾಡುವಾಗ ಕಟ್ಟಡದ ಕೆಳಭಾಗದಲ್ಲಿ ಮಾನವನ ತಲೆ ಮತ್ತು ಇತರ ಅಂಗಾಂಗಗಳ ಮೂಳೆಗಳು ದೊರೆತಿವೆ. ಇದರಿಂದ ಹಿಂದೆ ಕಾಲಭೈರವೇಶ್ವರ ದೇವತೆಗೆ ನರಬಲಿ ಕೊಡುತ್ತಿದ್ದರು ಎಂಬ ನಂಬಿಕೆ ಬೆಳೆದುಬಂದಿದೆ. ಕೆರೆಯ ಹತ್ತಿರ ಪುಷ್ಕರಣಿ ಮತ್ತು ಒಂದು ಮಂಟಪ ಇದೆ. ಗ್ರಾಮದ ಮೂಲ ದೇವರಾದ ಕಂಚೀರಾಯ ಸ್ವಾಮಿ ಜಾತ್ರೆಯು ಯುಗಾದಿಯಾದ ಒಂಬತ್ತು ದಿನದ ನಂತರ ನಡೆಯುತ್ತದೆ. ಈ ಜಾತ್ರೆಯಲ್ಲಿ ಕಂಚೀರಾಯ ಸ್ವಾಮಿಯನ್ನು ಬೆಟ್ಟದ ಮೇಲಿನಿಂದ ಮಂಟಪಕ್ಕೆ ಕರೆತರುತ್ತಾರೆ. ನಂತರ ಚೋಳಿಚವ್ವ ಮತ್ತು ಲಕ್ಕವ್ವ ಎಂಬ ದೇವರುಗಳೊಂದಿಗೆ ವಿವಾಹ ಮಾಡುತ್ತಾರೆ. ಈ ಎಲ್ಲಾ ಕಾರ್ಯ ವಿಧಿ ವಿಧಾನಗಳಿಗೂ ಇಲ್ಲಿನ ಪುಷ್ಕರಣಿಯ ನೀರನ್ನು ಬಳಸುತ್ತಾರೆ. ಪ್ರಸ್ತುತ ದಿನದಲ್ಲೂ ಇಂತಹ ಆಚರಣೆ ನಡೆಯುತ್ತಲಿದೆ.

ಈ ಗ್ರಾಮದಿಂದ ೧/೨ ಕಿ.ಮೀ. ದೂರದಲ್ಲಿ ಅಜ್ಜೇನಹಳ್ಳಿಕೆರೆ ಇದೆ. ಇದು ಹೆಚ್ಚು ವಿಸ್ತೀರ್ಣವಿಲ್ಲದ ಚಿಕ್ಕ ಕೆರೆಯಾಗಿದೆ. ಈ ಕೆರೆಗೆ ಹಿಂದೆ ನರಬಲಿಯನ್ನು ಕೊಡುತ್ತಿದ್ದರು ಎಂದು ಅಲ್ಲಿನ ಜನಪದರ ಹೇಳಿಕೆಯಾಗಿದೆ. ಇದರ ಬಗೆಗೆ ಯಾವುದೇ ವಿಧದ ಆಧಾರಗಳು ಕಂಡುಬರುವುದಿಲ್ಲ. ಇಂದು ಅಲ್ಲಿ ಯಾವುದೇ ಆಚರಣೆಗಳು ನಡೆಯುತ್ತಿಲ್ಲ.

ತುರುವೇಕೆರೆ ಪರಿಸರದ ಕೆರೆಗಳನ್ನು ಗಮನಿಸಿದಾಗ ಎಲ್ಲಾ ಕೆರೆಗಳಲ್ಲಿಯೂ ವಿವಿಧ ಆಚರಣೆಗಳು ಇರುವುದು ಕಂಡುಬಂದಿತು. ಕೆಲವು ಕೆರೆಗಳಲ್ಲಿ ಗಂಗಮ್ಮನ ಪೂಜೆ ಇನ್ನಿತರ ಆಚರಣೆಗಳು ಇಂದಿಗೂ ಪ್ರಚಲಿತದಲ್ಲಿವೆ. ಇದಕ್ಕೆ ಪ್ರಸ್ತುತ ಕ್ಷೇತ್ರಕಾರ್ಯಗಳಲ್ಲಿ ಸಂಗ್ರಹಿಸಿದ ಮಾಹಿತಿಗಳೇ ಸಾಕ್ಷಿಯಾಗಿದೆ.

**ಅಡಿಟಿಪ್ಪಣಿ:**

೧. ಕೊಟ್ರಯ್ಯ ಸಿ.ಟಿ.ಎಂ. (ಆಂಗ್ಲಮೂಲ), ಧ್ರುವ ನಾರಾಯಣ (ಕನ್ನಡ ಅನುವಾದ), ೨೦೦೧; ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ, ಪು-೧೩೬, ವಾಸುದೇವನ್ ಸಿ.ಎಸ್, ೨೦೦೧; ಹಂಪಿ ಪರಿಸರದ ಕೆರೆಗಳು, ಪು-೮೭.

೨. ಚಿದಾನಂದಮೂರ್ತಿ ಎಂ., ೧೯೭೯; ಕನ್ನಡ ಶಾಸನ ಸಂಸ್ಕೃತಿಗಳ ಅಧ್ಯಯನ, ಪು.೪೪೯; ನರೇಗಲ್ಲ ಎಂ.ಎಸ್, ೨೦೦೯, ಉತ್ತರ ಗದಗ ಜಿಲ್ಲೆಯ ಶಾಸನಗಳು ಒಂದು ಅಧ್ಯಯನ, ಪು-೧೯೮.

೩. ಕೊಟ್ರಯ್ಯ ಸಿ.ಟಿ.ಎಂ. (ಆಂಗ್ಲಮೂಲ), ಧ್ರುವ ನಾರಾಯಣ (ಕನ್ನಡ ಅನುವಾದ), ಪೂರ್ವೋಕ್ತ, ಪು-೧೩೮.

೪. E.I. Vol-XIV, P-108 (V.V. 32 to 35)

೫. MAR, 1919; ಪು-೩೩, ಕೊಟ್ರಯ್ಯ ಸಿ.ಟಿ.ಐ (ಆಂಗ್ಲಮೂಲ), ಧ್ರುವ ನಾರಾಯಣ (ಕನ್ನಡ ಅನುವಾದ), ಪೂರ್ವೋಕ್ತ, ಪು-೧೩೭.

೬. ಕೊಟ್ರಯ್ಯ ಸಿ.ಟಿ.ಎಂ. (ಆಂಗ್ಲಮೂಲ), ಧ್ರುವ ನಾರಾಯಣ (ಕನ್ನಡ ಅನುವಾದ), ಪೂರ್ವೋಕ್ತ, ಪು-೧೩೮, ವಾಸುದೇವನ್ ಸಿ.ಎಸ್, ಪೂರ್ವೋಕ್ತ, ಪು-೮೮

೭. ಕೊಟ್ರಯ್ಯ ಸಿ.ಟಿ.ಎಂ. (ಆಂಗ್ಲಮೂಲ), ಧ್ರುವ ನಾರಾಯಣ (ಕನ್ನಡ ಅನುವಾದ), ಪೂರ್ವೋಕ್ತ,, ಪು-೧೩೮.

೮. ಯೋಗೀಶ್ವರಪ್ಪ ಡಿ.ಎನ್, (ಸಂ), ೨೦೦೨; ಕಲ್ಪಸಿರಿ, ಪು-೧೧೮.

೯. ಬೋರಲಿಂಗಯ್ಯ ಹಿ.ಚಿ. (ಸಂ), ೧೯೯೬; ಕರ್ನಾಟಕ ಜಾನಪದ ಕಲೆಗಳ ಕೋಶ, ಪು-೧೬೪.

೧೦. ಮಪಪೇವ ಸಿ. (ಸಂ), ೨೦೦೯; ತೋಣ್ಣೂರು, ಪು-೧೬೪ : ತುರುವೇಕೆರೆ ತಾಲೂಕಿನ ಕ್ಷೇತ್ರಕಾರ್ಯದಲ್ಲಿ ಆನೆಕೆರೆ ಮತ್ತು ಕಣತೂರು ಗ್ರಾಮದ ಅರ್ಚಕರುಗಳಿಂದ ಸಂಗ್ರಹಿಸಿದ ವರದಿ.

## ಅಧ್ಯಾಯ ೬

# ಸಮಾರೋಪ

ಪ್ರಸ್ತುತ ಅಧ್ಯಯನದಲ್ಲಿ ನೀರು ಭೂಮಿಯ ಸಕಲ ಜೀವಕೋಶಗಳಿಗೂ ಆಧಾರ. ಜೀವ ಸೃಷ್ಟಿಗೆ ಅಲ್ಲದೆ ಜೀವಿಗಳ ಅಸ್ತಿತ್ವಕ್ಕೆ ನೀರು ಅಷ್ಟೇ ಮುಖ್ಯವಾಗಿದೆ. ಆಹಾರವಿಲ್ಲದೆ ಹಲವಾರು ವಾರ ಮನುಷ್ಯ ಬದುಕಬಲ್ಲ. ಆದರೆ ನೀರಿಲ್ಲದೆ ಎರಡು ಮೂರು ದಿನ ಮಾನವ ಬದುಕಲಾರ. ನಮ್ಮ ಶರೀರದಲ್ಲಿ ಶೇ. ೭೦ ಭಾಗ ನೀರು ಇದ್ದರೆ, ವೃಕ್ಷ ಮತ್ತು ಹಣ್ಣು ತರಕಾರಿಗಳಲ್ಲಿ ಶೇ. ೫೦ ರಿಂದ ೯೫ ಭಾಗದಷ್ಟು ನೀರು ಇರುತ್ತದೆ. ಪ್ರಾಗಿತಿಹಾಸ ಕಾಲದ ಮಾನವ ನೀರು ಸಿಗುವ ಸ್ಥಳಗಳನ್ನೇ ತನ್ನ ನೆಲೆಗಳಾಗಿ ಮಾಡಿಕೊಂಡಿದ್ದನು. ನಂತರ ನಾಗರೀಕತೆ ಬೆಳೆದಂತೆ ಕೃಷಿಯನ್ನೇ ತನ್ನ ಜೀವನಾಧಾರವಾಗಿ ಆರಂಭಿಸಿದನು. ಕೃಷಿಗೆ ನೀರನ್ನು ಪೂರೈಸಲು ಮಳೆ ಮತ್ತು ಹೊಳೆಯ ನೀರನ್ನು ಸಂಗ್ರಹಿಸಿತೊಡಗಿದನು. ಅಂತಹ ಕೃತಕ ಸಂಗ್ರಹಗಳಾಗಿ ಕೆರೆ, ಕಟ್ಟೆ ಮತ್ತು ಬಾವಿಗಳಾಗಿ ನಿರ್ಮಿಸಿಕೊಂಡಿರುವುದನ್ನು ಗಮನಿಸಬಹುದು.

ಪುರಾತನ ಕಾಲದಿಂದಲೂ ಭಾರತದ ಕೃಷಿಯಲ್ಲಿ ನೀರಾವರಿಯ ಬಳಕೆಯು ಕಂಡುಬಂದಿದೆ. ಕೆರೆ, ಕಟ್ಟೆ, ಬಾವಿ ಮತ್ತು ಕಾಲುವೆ ನೀರಾವರಿಗಳು ಬಹು ಹಿಂದಿನಿಂದಲೂ ನೀರಾವರಿ ಮೂಲಗಳಾಗಿವೆ. ಈ ದೇಶದ ಸಾಹಿತ್ಯ ಕೃತಿಗಳಾದ ರಾಮಾಯಣ, ಮಹಾಭಾರತ, ಕೌಟಿಲ್ಯನ ಅರ್ಥಶಾಸ್ತ್ರ, ಪದ್ಮಪುರಾಣ, ಜಾತಕ ಕಥೆಗಳು, ಶುಕ್ರನ ನೀತಿಸಾರ ಮತ್ತು ತಮಿಳು ಸಂಗಮ ಸಾಹಿತ್ಯಗಳು ಸಹ ಕೆರೆ ನೀರಾವರಿ ಬಗ್ಗೆ ಅನೇಕ ಮಾಹಿತಿಗಳನ್ನು ತಿಳಿಸುತ್ತವೆ. ಹಾಗೆಯೇ ಕೃಷ್ಣದೇವರಾಯನ 'ಆಮುಕ್ತ ಮಾಲ್ಯ' ಕೃತಿಯಲ್ಲಿ ಕೆರೆ ಕಾಲುವೆಗಳ ಬಗ್ಗೆ ಉಲ್ಲೇಖವಾಗಿರುವುದು ಕಂಡುಬಂದಿದೆ.

ಕರ್ನಾಟಕದ ತುಮಕೂರು ಜಿಲ್ಲೆಯಲ್ಲಿ ಸಾಕಷ್ಟು ಕೆರೆಗಳಿವೆ. ಈ ಜಿಲ್ಲೆಯ ಒಂದು ತಾಲೂಕಾದ ತುರುವೇಕೆರೆ ತಾಲೂಕಿನಲ್ಲಿ ೧೧೯ಕ್ಕೂ ಹೆಚ್ಚಿನ ಕೆರೆಗಳಿದ್ದು, ಇವುಗಳ ಸಮಗ್ರ ಅಧ್ಯಯನ ಆಗಬೇಕಾಗಿದೆ. ಈ ಉದ್ದೇಶದಿಂದ ಪ್ರಸ್ತುತ ಸಂಪ್ರಬಂಧದಲ್ಲಿ ಕೆರೆಗಳ ಉಗಮದಿಂದ ಹಿಡಿದು ವಿವಿಧ ಕಾಲದಲ್ಲಿ ರಚನೆಯಾದ ಅವುಗಳ ಹಿಂದಿನ ಸ್ಥಿತಿಗತಿಗಳು, ಕೆರೆ ಆಧಾರಿತವಾಗಿ ಬೆಳೆದ ಬೆಳೆಗಳು ಮತ್ತು ನಂಬಿಕೆ ಆಚರಣೆಗಳನ್ನು ತಿಳಿಯುವ ಪ್ರಯತ್ನ ಮಾಡಲಾಗಿದೆ.

ಈ ಅಧ್ಯಯನದಲ್ಲಿ ತಾಲೂಕಿನ ಅಧಿಕಾರಿಗಳು, ವರ್ತಕರು, ಜನಸಾಮಾನ್ಯರು, ಕೆರೆಗಳ ಬಗ್ಗೆ ಇರುವ ಐತಿಹ್ಯಗಳು, ಶಾಸನಗಳು, ವೀರಗಲ್ಲುಗಳು ಮತ್ತು ದೇವಾಲಯಗಳನ್ನು ಆಕರಗಳಾಗಿ ಬಳಸಿಕೊಳ್ಳಲಾಗಿದೆ. ಅಲ್ಲದೇ ಇಲ್ಲಿನ ಭೌಗೋಳಿಕ ಲಕ್ಷಣಗಳನ್ನು ಗಮನಿಸಿಕೊಂಡು ಕೆರೆಗಳ ಅಧ್ಯಯನ ಕೈಗೊಳ್ಳಲಾಗಿದೆ. ಈ ಪರಿಸರದಲ್ಲಿ ಅನೇಕ ರಾಜಮನೆತನಗಳು ಆಳ್ವಿಕೆ ನಡೆಸಿವೆ. ಅವರ ಆಳ್ವಿಕೆಯ ಅವಧಿಯಲ್ಲಿ ಹಲವಾರು ಕೆರೆಗಳು ಕಂಡುಬಂದಿವೆ. ಅವುಗಳಲ್ಲಿ ಹೆಚ್ಚಿನ ಕೆರೆಗಳು ಹೊಯ್ಸಳ ಕಾಲದಲ್ಲಿ ನಿರ್ಮಾಣವಾಗಿವೆ ಎಂಬ ಅಂಶವನ್ನು ಶಾಸನಾಧಾರಗಳಿಂದ ಹರಿಯಲಾಗಿದೆ. ಕೆರೆಗಳನ್ನು ಅರಸರು ತಮ್ಮ ಗೌರವ ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳಲು ಮತ್ತು ತಮ್ಮ ತಾಯಿಯರ ಹಾಗೂ ಯುದ್ಧಗಳಲ್ಲಿ ಗಳಿಸಿದ ಸ್ಮಾರಣಾರ್ಥವಾಗಿ ನಿರ್ಮಿಸುತ್ತಿದ್ದರು. ಕೆಲವು ಸಂದರ್ಭಗಳಲ್ಲಿ ಅಗ್ರಹಾರವನ್ನು ಸ್ಥಾಪಿಸಿ, ಬ್ರಾಹ್ಮಣರಿಗೆ ದತ್ತಿ ನೀಡುವ ಮತ್ತು ದೇವಾಲಯಗಳನ್ನು ಕಟ್ಟಿಸಿ ಅದರ ಅಗತ್ಯತೆಗಳನ್ನು ಪೂರೈಸುವ ಸಾಂಸ್ಕೃತಿಕ ಸಂವರ್ಧನೆಯ ಸಂಬಂಧವಾಗಿ ಇಲ್ಲಿನ ಕೆರೆಗಳು ನಿರ್ಮಾಣವಾಗಿರುವುದನ್ನು ಶಾಸನಾಧಾರಗಳಿಂದ ಗುರುತಿಸಬಹುದು. ಹೀಗೆ ನಿರ್ಮಾಣವಾದ ಕೆರೆಗಳು ಕೇವಲ ಬ್ರಾಹ್ಮಣ ಮತ್ತು ರಾಜಮನೆತದವರಿಗೆ ಮಾತ್ರ ಸೀಮಿತವಾಗಿರದೆ ಸಾರ್ವಜನಿಕವಾಗಿ ಉಪಯುಕ್ತವಾಗುತ್ತಿವೆ. ಇಂದಿನ ದಿನಗಳಲ್ಲಿ ಯಾವುದೇ ಜಾತಿಯ ತಾರತಮ್ಯ ಇಲ್ಲದೇ ಎಲ್ಲಾ ಜನಪದರಿಗೂ ಬಳಕೆಯಲ್ಲಿವೆ.

ತುರುವೇಕೆರೆ ತಾಲೂಕಿನ ಕೆರೆಗಳು ಸರಣಿ (ಲಿಂಕ್) ರೂಪದಲ್ಲಿ ನಿರ್ಮಾಣಗೊಂಡಿವೆ. ಕೆರೆಗಳನ್ನು ಪರಿಸರಕ್ಕೆ ಅನುಗುಣವಾಗಿ ಮೂರು ಅಥವಾ ನಾಲ್ಕು ಕೆರೆಗಳನ್ನು ಒಂದಕ್ಕೊಂದು ಹೊಂದಿಕೊಂಡಿರುವಂತೆ ಸಮೀಪದಲ್ಲಿಯೇ ಕಟ್ಟಿರುವುದನ್ನು ಗಮನಿಸಬಹುದು. ಕೆರೆಯ ನೀರನ್ನು ಸಂಗ್ರಹಿಸುವ ದೃಷ್ಟಿಯಿಂದ ಕೆರೆಯ ಏರಿಯನ್ನು ಅಂಕುಡೊಂಕಾಗಿ ನಿರ್ಮಿಸಿದ್ದಾರೆ. ಇದರಿಂದ ಏರಿಗೆ ಬೀಳುವ ಒತ್ತಡವು ಸಮವಾಗಿ ಹಂಚಿಕೆಯಾಗುತ್ತದೆ. ಮತ್ತು ಏರಿಯು ಒಡೆದಲ್ಲಿ ಸುಲಭವಾಗಿ ಸರಿಪಡಿಸಬಹುದು. ಇಂತಹ ಒಂದು ಪ್ರಾಚೀನ ನೀರಾವರಿ ತಂತ್ರಜ್ಞಾನವನ್ನು ಇಲ್ಲಿ ಗುರುತಿಸಬಹುದು. ಕೆರೆಯಲ್ಲಿ ಸಂಗ್ರಹವಾದ ನೀರನ್ನು ತೂಬುಗಳಿಂದ ಆಯಕಟ್ಟು ಪ್ರದೇಶಕ್ಕೆ ಹಾಯಿಸಲಾಗುತ್ತದೆ. ಈ ಪರಿಸರದ ಹೆಚ್ಚಿನ ಕೆರೆಗಳಲ್ಲಿ ಮರದ ದಿಮ್ಮಿಯ ತೂಬು ಹೆಚ್ಚಾಗಿ ಕಂಡುಬಂದಿದೆ. ಇದರ ವಿಶೇಷತೆ ಏನೆಂದರೆ ಅದು ನೀರಿನಲ್ಲಿ ನೆನೆದಾಗ ನೀರು

ಕುಡಿದು ಹಿಗ್ಗುತ್ತದೆ. ಈ ರೀತಿಯಾದ ಹಿಗ್ಗಿದ ಮರದ ತುಂಡು ರಂಧ್ರದಲ್ಲಿ ಬಿಗಿಯಾಗಿ ಕುಳಿತು ನೀರು ಹೊರ ಕಾಲುವೆಯ ಮುಖಾಂತರ ಹೋಗದಂತೆ ತಡೆಯುತ್ತದೆ. ಕೆರೆಯ ರಕ್ಷಣೆಯ ದೃಷ್ಟಿಯಿಂದ ಕೆಲವು ಕೆರೆಗಳಲ್ಲಿ ಎರಡು ಕೋಡಿಗಳಿದ್ದರೆ, ಇನ್ನುಳಿದ ಕೆರೆಗಳಲ್ಲಿ ಒಂದು ಕೋಡಿ ಇರುತ್ತದೆ. ಕೆರೆಯ ಗಾತ್ರವನ್ನು ಅವಲಂಬಿಸಿ ನಿರ್ಮಿಸಲಾಗಿದೆ. ಈ ವ್ಯವಸ್ಥೆಯಿಂದ ಕೆರೆಯ ಹೆಚ್ಚುವರಿ ನೀರು ವೆಚ್ಚವಾಗದಂತೆ ಮತ್ತೊಂದು ಕರೆಯಲ್ಲಿ ಸಂಗ್ರಹವಾಗುತ್ತದೆ. ಮತ್ತು ಕೆರೆಯ ಏರಿಗೆ ಯಾವುದೇ ಧಕ್ಕೆಯಾಗಂದತೆ ರಕ್ಷಣೆ ಒದಗಿಸುತ್ತದೆ. ಅದೇ ರೀತಿ ಕಾಲುವೆಗಳು ಸಹ ಕೆರೆಯ ಭಾಗಗಳಲ್ಲಿ ಒಂದಾಗಿ ಕರೆಗೆ ರಕ್ಷಣೆಯನ್ನು ಒದಗಿಸುತ್ತವೆ. ಇಲ್ಲಿನ ಕೆರೆಗಳಲ್ಲಿ ಎರಡು ರೀತಿಯ ಕಾಲುವೆಗಳನ್ನು ಕಾಣಬಹುದು. ಒಂದು ಕೆರೆಗೆ ನೀರು ಬರಲು ಮತ್ತೊಂದು ಕೆರೆಯಿಂದ ಆಯಕಟ್ಟು ಪ್ರದೇಶಕ್ಕೆ ನೀರನ್ನು ಹರಿಸಲು ಕಾಲುವೆಗಳನ್ನು ನಿರ್ಮಿಸಲಾಗಿದೆ.

ಕೆರೆಗಳ ನಿರ್ಮಾಣ, ಸಂರಕ್ಷಣೆಯ ಮತ್ತು ನಿರ್ವಹಣೆಯಲ್ಲಿ ಮಂತ್ರಿಗಳು, ಸಂಧಿವಿಗ್ರಹಿಗಳು, ಊರಗೌಡರು, ಜಲಸೂತ್ರಧಾರರು, ಶ್ಯಾನುಭೋಗರು, ನಿರ್ಗಂಟಿಗಳು, ತಳವಾರರು, ಗ್ರಾಮ ಪಂಚಾಯಿತಿಯ ಅಧಿಕಾರಿಗಳು ಮತ್ತು ಜನಸಾಮಾನ್ಯರು ಪ್ರಮುಖ ಪಾತ್ರ ವಹಿಸುತ್ತಿದ್ದರು. ಇವರು ಕೆರೆಗಳನ್ನು ಕಟ್ಟುವಂತೆ ಹೇಳುತ್ತಿದ್ದರು. ಕೆರೆಗಳನ್ನು ಬೇರೆ ಜನಾಂಗದವರೆ ಕಟ್ಟಿರುವುದು ಕಂಡುಬರುತ್ತದೆ. ಇಲ್ಲಿನ ಕೆರೆಗಳ ನಿರ್ವಹಣೆ ಕಾರ್ಯವನ್ನು ಹಿಂದಿನಿಂದಲೂ ನೀರ್ಗಂಟಿಗಳು ನಿರ್ವಹಿಸುತ್ತಿದ್ದರು. ಇಂದು ಕೆಲವು ಕೆರೆಗಳಿಗೆ ಹೇಮಾವತಿ ನಾಲೆಯ ನೀರು ಹರಿದು ಬರುವುದರಿಂದ ಇವುಗಳ ಸಂರಕ್ಷಣೆಯನ್ನು ಇಲಾಖೆಯವರು ನಿರ್ವಹಣೆ ಮಾಡುತ್ತಿದ್ದಾರೆ. ಈ ತಾಲೂಕಿನ ಚನ್ನಕೇಶವ ದೇವಾಲಯದ ಪೂರ್ವ ದಿಕ್ಕಿನ ತೊಲೆಕಲ್ಲಿನ ಹೊಯ್ಸಳ ಕಾಲದ ಒಂದು ಶಾಸನವಿದೆ. ಅದರಲ್ಲಿ ತುರುವೇಕೆರೆ ಪರಿಸರದ ಕೆರೆ ನೀರಿನ ನಿರ್ವಹಣೆಯ ನಿಯಮಗಳ ಬಗ್ಗೆ ಉಲ್ಲೇಖವಿರುವುದನ್ನು ಗಮನಿಸಬಹುದು.

ತುರುವೇಕೆರೆ ಪರಿಸರವು ಹಿಂದಿನಿಂದಲೂ ಬಯಲುಸೀಮೆ ಪ್ರದೇಶವಾಗಿದ್ದು ಇಂದು ಕಲ್ಪತರು ನಾಡಾಗಿದೆ. ಇದರಿಂದ ಇಲ್ಲಿನ ಕೆರೆಗಳು ಹೆಚ್ಚು ಆಳವಿಲ್ಲದೆ ತಟ್ಟೆಯಂತೆ ಹರಡಿಕೊಂಡಿವೆ. ಈ ಕೆರೆಗಳು ಹಿಂದೆ ಮಳೆ ನೀರನ್ನು ಅವಲಂಬಿಸಿದ್ದವು. ಕೆರೆಗಳ ನೀರನ್ನು ಬಳಸಿಕೊಂಡು ವಿವಿಧ ಬೆಳೆಗಳನ್ನು ಬೆಳೆಯುತ್ತಿದ್ದರು. ಇಲ್ಲಿನ ಶಾಸನಗಳಲ್ಲಿ ಕೆರೆ ಕೆಳಗಿನ ಗದ್ದೆ ಬೆದ್ದಲುಗಳ ಬಗ್ಗೆ ಉಲ್ಲೇಖವಾಗಿದೆ. ಇದರಿಂದ ತಾಲೂಕಿನಲ್ಲಿ ತರಿ ಮತ್ತು ಖುಷ್ಕಿ ಎರಡು ಬೆಳೆಗಳನ್ನು ಬೆಳೆಯುತ್ತಿದ್ದರು ಎಂಬುದಾಗಿ ತಿಳಿದುಬಂದಿದೆ. ಜನಸಂಖ್ಯೆ ಹೆಚ್ಚಾದಂತೆ ಈ ರೀತಿಯ ನೀರಾವರಿ ವ್ಯವಸ್ಥೆಯಿಂದ ರೈತನ ಬೆಳೆಯಲ್ಲಿ ಸಮತೋಲನ ಕಂಡುಬರದೆ ಅವರ ಆರ್ಥಿಕ ಜೀವನದಲ್ಲಿ ಸುಸ್ಥಿತಿ ಕಂಡುಬಂದಿದೆ. ಪ್ರಸ್ತುತ ದಿನಗಳಲ್ಲಿ ಕೆಲವು ಕೆರೆಗಳಿಗೆ ಹೇಮಾವತಿಯ ನಾಲೆಯ ನೀರು ಹರಿದು ಬರುವುದರಿಂದ ಮುಂಗಾರು, ಹಿಂಗಾರು ಮತ್ತು ಬೇಸಿಗೆ ಬೆಳೆಗಳನ್ನು

ಬೆಳೆಯಲು ಸಹಕಾರಿಯಾಗಿವೆ. ಅವುಗಳಲ್ಲಿ ಭತ್ತ, ತೆಂಗು ಮತ್ತು ಅಡಿಕೆ ಬೆಳೆಗಳು ಪ್ರಮುಖವಾಗಿ ಕಂಡುಬಂದಿವೆ. ಕೆರೆಗಳು, ಮೀನುಗಳ ಸಾಕಾಣಿಕೆಗೆ ಮತ್ತು ಜಾನುವಾರುಗಳ ಕುಡಿಯುವ ನೀರಿಗಾಗಿ ಬಳಕೆಯಾಗುತ್ತಿವೆ. ಬೇಸಿಗೆ ಕಾಲದಲ್ಲಿ ಕೆರೆಗಳಲ್ಲಿ ನೀರು ಕಡಿಮೆಯಾದಾಗ ಕೆರೆಯ ಅಂಗಳದಲ್ಲಿ ಪಶುಪಾಲಕರು ಜಾನುವಾರುಗಳನ್ನು ಮೇಯಿಸುತ್ತಿದ್ದರು. ಹಾಗೂ ಕೆರೆಯ ಮಣ್ಣನ್ನು ಉಪಯೋಗಿಸಿಕೊಂಡು ಜನಪದರು ಇಟ್ಟಿಗೆ ತಯಾರಿಸುತ್ತಿರುವುದು ಈ ಅಧ್ಯಯನದಿಂದ ತಿಳಿದುಬಂದಿದೆ. ಇದರಿಂದ ಜನರ ಆರ್ಥಿಕ ಪ್ರಗತಿಯು ಉತ್ತಮಗೊಳ್ಳುತ್ತದೆ.

ಈ ಕೆರೆಗಳ ಅಸ್ಥಿತ್ವದಿಂದಾಗಿ ಆ ಗ್ರಾಮಗಳು ತೀವ್ರ ಬರಗಾಲದಿಂದ ಪಾರಾಗಿವೆ. ಏಕೆಂದರೆ ಇವು ಜನರ ಜೀವನದ ಪ್ರಾಥಮಿಕ ಆಕರಗಳಾಗಿವೆ. ಕೆರೆಗಳಿಂದ ಅಂತರ್ಜಲ ಮಟ್ಟ ಹೆಚ್ಚಾಗುತ್ತಿದೆ. ಗ್ರಾಮಗಳ ಬಾವಿ, ಕೊಳ ಮತ್ತು ಕೊಳವೆ ಬಾವಿಗಳ ಅಂತರ್ಜಲ ಮಟ್ಟ ಏರಿರುವುದು ಪ್ರಸ್ತುತ ಅಧ್ಯಯನದಲ್ಲಿದೆ.

ಕೆರೆಗೆ ಸಂಬಂಧಿಸಿದ ಧಾರ್ಮಿಕ ಆಚರಣೆಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಇಲಾಖೆ ಕೆರೆಗಳಲ್ಲದೆ ಕೆಲವು ಕೆರೆಗಳ ನಿರ್ವಹಣೆಯನ್ನು ನೀರ್ಗಂಟಿಗಳು ನೋಡಿಕೊಳ್ಳುತ್ತಿದ್ದರು. ಇವರು ಕೆರೆಗಳು ತುಂಬಿದಾಗ ಬಾಗಿನ ಅರ್ಪಣೆ ಮಾಡುತ್ತಾರೆ. ಮತ್ತು ಕೆರೆಯ ಸುತ್ತಮುತ್ತಲಿನ ಗ್ರಾಮದ ಜನರು ಕೆಲವು ಕೆರೆಗಳಲ್ಲಿ ಗಂಗಮ್ಮನ ಪೂಜೆಯನ್ನು ವಿಶೇಷವಾಗಿ ಆಚರಿಸುತ್ತಿದ್ದರು. ಗಣೇಶ ಚತುರ್ಥಿ ಆದ ನಂತರ ಗಣೇಶನನ್ನು ಕರೆಗಳಲ್ಲಿ ವಿಸರ್ಜನೆ ಮಾಡುವ ಪದ್ಧತಿಗಳು ಈ ಅಧ್ಯಯನದಲ್ಲಿದೆ. ಕೆರೆಯ ಪರಿಸರದಲ್ಲಿ ದೇವಾಲಯಗಳು ಪುಷ್ಕರಣಿಗಳು ಇದ್ದವು. ಈ ಪುಷ್ಕರಣಿಯ ನೀರನ್ನು ದೇವಾಲಯಗಳ ಧಾರ್ಮಿಕ ಪೂಜೆಗೆ ಬಳಸುತ್ತಿರುವುದು ಇಂದಿಗೂ ಕೆಲವು ಕೆರೆಗಳಲ್ಲಿ ಆಚರಣೆಯಲ್ಲಿರುವುದು ಕಂಡುಬಂದಿದೆ. ತಾಲೂಕಿನ ದೊಡ್ಡ ಕೆರೆಯಾದ ಮಲ್ಲಾಘಟ್ಟ ಕೆರೆಗೆ ಸುತ್ತಮುತ್ತಲಿನ ಗ್ರಾಮದ ಗ್ರಾಮದೇವತೆಗಳು ಶಿವರಾತ್ರಿಯಿಂದ ಹಿಡಿದು ಯುಗಾದಿಯವರೆಗೂ ಗಂಗಾಸ್ನಾನಕ್ಕೆ ಬರುತ್ತಿದ್ದವು. ಕೆಲವು ಸಂದರ್ಭದಲ್ಲಿ ಶ್ರವಣ ಮತ್ತು ಕಾರ್ತಿಕ ಮಾಸದಲ್ಲಿ ಆಗಮಿಸುತ್ತಿರುವುದು ಕಂಡುಬಂದಿದೆ. ಇಲ್ಲಿನ ವಿಶೇಷ ಅಂಶವೇನೆಂದರೆ ನದಿಗಳಿಗಿರುವ ಪಾವಿತ್ರತೆಯ ಭಾವನೆಯನ್ನು ಈ ಪರಿಸರದ ಜನರು ಕೆರೆಗಳಿಗೆ ಕೊಟ್ಟಿರುವುದನ್ನು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

ತಾಲೂಕಿನ ಕೆಲವು ಕೆರೆಗಳಿಗೆ ಹೇಮಾವತಿ ನಾಲೆಯ ನೀರು ಹರಿದು ಬರುವುದರಿಂದ ಹೂಳು ತುಂಬಿಕೊಂಡಿದೆ. ಅದೇ ರೀತಿ ಮಳೆಯಾಶ್ರಿತ ಕೆರೆಗಳು, ರಕ್ಷಣೆ ಇಲ್ಲದೆ ನಾಶವಾಗುವ ಪಂಚಿನಲ್ಲಿವೆ. ಇಂತಹ ಕೆರೆಗಳತ್ತ ಕೆರೆಗೆ ಸಂಬಂಧಿಸಿದ ಇಲಾಖೆ ಮತ್ತು ತಾಲೂಕಿನ ಗ್ರಾಮಪಂಚಾಯತ್ ಗಮನಹರಿಸಬೇಕು. ಕೆರೆಗಳಲ್ಲಿ ಹೂಳೆತ್ತಿಸಿ ಜೀರ್ಣೋದ್ಧಾರ ಮಾಡಿದರೆ

ಮುಂದಿನ ಪೀಳಿಗೆಗೆ ಕೆರೆಗಳ ಅಸ್ಥಿತ್ವವನ್ನು ಉಳಿಸಬಹುದು ಎಂಬ ಪ್ರಯತ್ನವು ಈ ಅಧ್ಯಯನದಿಂದ ತಿಳಿದುಬರುತ್ತದೆ. ಪ್ರಸ್ತುತ ಈ ಸಂಪ್ರಬಂಧದಲ್ಲಿ ತುರುವೇಕೆರೆ ಪರಿಸರದ ಪ್ರಾಚೀನ ಕೆರೆಗಳನ್ನು ಪುನರ್ ಪರಿಶೀಲಿಸಿ ಇಂದಿಗೂ ಅವುಗಳ ಅಸ್ಥಿತ್ವವನ್ನು ಮತ್ತು ಪ್ರಯೋಜನವನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

# ಅನುಬಂಧಗಳು

ಗ್ರಂಥಋಣ

ಪದಕೋಶ

ವಕ್ತೃಗಳ ವಿವರ

ತಾಲ್ಲೂಕಿನಲ್ಲಿ ಕೆರೆಗಳ ಸಮಗ್ರ ಪಟ್ಟಿಯ ವಿವರ

ತಾಲ್ಲೂಕಿನಲ್ಲಿ ಬೆಳೆಯುವ ಒಟ್ಟು ಬೆಳೆಯ ಅಂಕಿ ಅಂಶಗಳ ವಿವರ

ಛಾಯಾಚಿತ್ರಗಳು

## ಗ್ರಂಥಋಣ


೦೧. ಕನ್ನಡ ವಿಷಯ ವಿಶ್ವಕೋಶ, ೨೦೦೫; ಕರ್ನಾಟಕ ಪರಿಷ್ಕೃತ, ಸಂಪುಟ–೧, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೦೨. ಕನ್ನಡ ವಿಷಯ ವಿಶ್ವಕೋಶ, ೨೦೦೭; ಕರ್ನಾಟಕ ಪರಿಷ್ಕೃತ, ಸಂಪುಟ–೨, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೦೩. ಕಮರೇಶ್ ಕೆ.ಆರ್., ೨೦೦೯; ಚಿಕ್ಕನಾಯಕನಹಳ್ಳಿ ತಾಲೂಕು ಐತಿಹಾಸಿಕ ಮತ್ತು ಸಾಂಸ್ಕೃತಿಕ ಅಧ್ಯಯನ (ಕ್ರಿ.ಶ. ೧೭೨೦–೧೯೯೯) ಅಂಕಿತ ಪ್ರಕಾಶನ, ಬೆಂಗಳೂರು.

೦೪. ಕಲಬುರ್ಗಿ ಎಂ.ಎಂ., ೧೯೯೪; ಕರ್ನಾಟಕದ ಕೈಫಿಯತ್ತುಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೦೫. ಕವಿತಾ ಕೃಷ್ಣ (ಸಂ), ೨೦೦೨; ಫೆಬ್ರವರಿ ೧೫, ೧೬ ಮತ್ತು ೧೭ ಜಯಮಂಗಲಿ ೬೯ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ, ತುಮಕೂರು.

೦೬. ಕುಮಾರಸ್ವಾಮಿ ಕೆ.ಎಚ್., ೧೯೯೬; ಪ್ರಾಚೀನ ಕರ್ನಾಟಕದಲ್ಲಿ ಶಿಲ್ಪಚಾರಿಯರು ಒಂದು ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು.

೦೭. ಕೃಷ್ಣಮೂರ್ತಿ ಪಿ.ವಿ. (ಲೇಖನ), ೨೦೦೧; ಇತಿಹಾಸ ದರ್ಶನ, ಸಂಪುಟ–೧೬, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

೦೮. ಕೋಟ್ರಯ್ಯ ಸಿ.ಟಿ.ಎಂ. (ಆಂಗ್ಲಮೂಲ), ಧ್ರುವ ನಾರಾಯಣ (ಕನ್ನಡ ಅನುವಾದ) ೨೦೦೧; ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೦೯. ಗೋಪಾಲ್ ಆರ್. (ಸಂ), ೨೦೦೮; ಮಂಡ್ಯ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಅರಮನೆ ಆವರಣ, ಮೈಸೂರು.

೧೦. ಗೋಪಾಲ್ ಆರ್. (ಸಂ), ೨೦೦೯; ತುಮಕೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಅರಮನೆ ಆವರಣ, ಮೈಸೂರು.

೧೧. ಚಿದಾನಂದಮೂರ್ತಿ ಎಂ., ೧೯೭೯; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೧೨. ಚಂದ್ರಶೇಖರಯ್ಯ ಬಿ.ಎಂ., ೨೦೦೫; ಕರ್ನಾಟಕದ ಸಾಂಸ್ಕೃತಿಕ ಇತಿಹಾಸ ಪರಂಪರೆ, ಸಿ.ವಿ.ಜಿ. ಪಬ್ಲಿಕೇಶನ್ಸ್, ಬೆಂಗಳೂರು.

೧೩. ದೀಕ್ಷಿತ್ ಜಿ.ಎಸ್. (ಲೇಖನ), ೧೯೯೨; ಇತಿಹಾಸ ದರ್ಶನ, ಸಂಪುಟ-೭, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

೧೪. ದೀಕ್ಷಿತ್ ಜಿ.ಎಸ್, ಕುಪ್ಪಸ್ವಾಮಿ ಜಿ.ಎಸ್, ಮೋಹನ್ ಎಸ್.ಕೆ, ನೀಲತ್ತಹಳ್ಳಿ ಕಸ್ತೂರಿ (ಕನ್ನಡ ಅನುವಾದ), ೨೦೦೦; ಕರ್ನಾಟಕದಲ್ಲಿ ಕೆರೆ ನೀರಾವರಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೫. ದೇವರಕೊಂಡಾರೆಡ್ಡಿ (ಸಂ), ೨೦೦೬; ಹಂಪಿ ಸಂಪುಟ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೬. ಸರೇಗಲ್ಲ ಎಂ.ಎಸ್., ೨೦೦೯; ಉತ್ತರ ಗದಗ ಜಿಲ್ಲೆಯ ಶಾಸನಗಳು ಒಂದು ಅಧ್ಯಯನ, ರಶ್ಮಿ ಪ್ರಕಾಶನ, ಗದಗ.

೧೭. ನಾಗಭೂಷಣ, ೧೯೯೧; ಗುಬ್ಬಿ ಒಂದು ಸಾಂಸ್ಕೃತಿಕ ದರ್ಶನ, ಸಿರಿಗನ್ನಡ ಪ್ರಕಾಶನ, ಬೆಂಗಳೂರು.

೧೮. ನಂದೀಶ್ವರ ಎನ್., ೨೦೦೮; ಸಿರಾ ತಾಲೂಕು ದರ್ಶನ, ಪೂರ್ಣಚಂದ್ರ ತೇಜಸ್ವಿ ಪ್ರಕಾಶನ, ಬಾಲಾಜಿ ನಗರ, ಸಿರಾ, ತುಮಕೂರು.

೧೯. ಪಾರ್ಥಸಾರಥಿ, ಟಿ.ಎ. (ಸಂ), ೨೦೦೩, ಮಂಡ್ಯ ಜಿಲ್ಲಾ ಗ್ಯಾಸೆಟಿಯರ್ ರಾಷ್ಟ್ರೋತ್ಥಾನ ಮುದ್ರಣಾಲಯ, ಕೇಶವ ಶಿಲ್ಪ, ಕೆಂಪೇಗೌಡ ನಗರ, ಚಾಮರಾಜಪೇಟೆ, ಬೆಂಗಳೂರು.

೨೦. ಪಾಟೀಲ ಎಂ.ಬಿ. (ಲೇಖನ), ೧೯೮೯; ಇತಿಹಾಸ ದರ್ಶನ, ಸಂಪುಟ-೫, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

೨೧. ಬರಗೂರು ರಾಮಚಂದ್ರಪ್ಪ, ೧೯೮೪; ಕರ್ನಾಟಕ ಸಂಗಾತಿ, ಭಾಗ-೧, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು.

೨೨. ಭಾಸ್ಕರಪ್ಪ ಸಿ.ಎಸ್., ೧೯೮೭; ತುಮಕೂರು ಜಿಲ್ಲಾ ದರ್ಶನ, ತುಮಕೂರು ಟೈಮ್ಸ್ ಪ್ರಕಾಶನ, ಬೆಂಗಳೂರು.

೨೩. ಬೇಂದ್ರೆ ಮಂಜುನಾಥ, ೨೦೦೯; ಕರ್ನಾಟ ಜಿಲ್ಲಾ ದರ್ಶನ, ಕರಾವಳಿ ಪ್ರಕಾಶನ, ಮಂಗಳೂರು.

೨೪. ಭೈರಪ್ಪ ಕೆ., ೧೯೯೭; ತುರುವೇಕೆರೆ ತಾಲೂಕು ದರ್ಶನ, ಅಶ್ವಿನಿ ಗ್ರಾಫಿಕ್ಸ್, ಬೆಂಗಳೂರು.

೨೫. ಬೋರಲಿಂಗಯ್ಯ ಹಿ.ಚಿ. (ಸಂ), ೧೯೯೬; ಕರ್ನಾಟಕ ಜನಪದ ಕಲೆಗಳ ಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೬. ಮಹದೇವ ಸಿ, ಸುಬ್ಬಣ್ಣ ರೈ ಎ., ಮಾಧವ ಪೆರಾಜೆ, ೨೦೦೨; ಹೊಸಪೇಟೆ ತಾಲೂಕು ದರ್ಶನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೭. ಮಹದೇವ ಸಿ. (ಸಂ), ೨೦೦೯; ತೋಣ್ಣುರು , ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೮. ಯೋಗೀಶ್ವರಪ್ಪ ಡಿ.ಎಸ್., ೧೯೯೯; ಹಾಗಲವಾಡಿ ನಾಯಕರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೯. ಯೋಗೀಶ್ವರಪ್ಪ ಡಿ.ಎಸ್., ೨೦೦೨; ಕಲ್ಪಸಿರಿ, ಅಖಿಲ ಭಾರತ ೬೯ನೇ ಕನ್ನಡ ಸಾಹಿತ್ಯ ಸಮ್ಮೇಳನ, ತುಮಕೂರು, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

೩೦. ರೈಸ್ ಬಿ.ಎಲ್., ೧೯೦೪; ಎಫಿಗ್ರಾಫಿ ಆಫ್ ಕರ್ನಾಟಿಕ ಸಂಪುಟ–೧೨, ತುಮಕೂರು ಜಿಲ್ಲೆಯ ಶಾಸನಗಳು, ಮೈಸೂರು ಸರ್ಕಾರ, ಕೇಂದ್ರ ಮುದ್ರಣಾಲಯ, ಬೆಂಗಳೂರು.

೩೧. ರಂಗನಾಥ, ೨೦೦೬; ಭಾರತ ಪ್ರಾದೇಶಿಕ ಮತ್ತು ಆರ್ಥಿಕ ಭೂಗೋಳಶಾಸ್ತ್ರ, ವಿದ್ಯಾನಿಧಿ ಪ್ರಕಾಶನ, ಗದಗ.

೩೨. ವಾಸುದೇವನ್ ಸಿ.ಎಸ್., ೨೦೦೧; ಹಂಪಿ ಪರಿಸರದ ಕೆರೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೩. ವಾಸುದೇವ ಬಡಿಗೇರ, ೨೦೦೮; ಹಾನಗಲ್ಲು, ಸ್ಥಳೀಯ ಚರಿತ್ರೆ ಮತ್ತು ಪುರಾತತ್ವ ಮಾಲೆ–೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೪. ಶಾಸ್ತ್ರೀ ಎನ್., ಎಫಿಗ್ರಾಫಿ ಆಫ್ ಕರ್ನಾಟಿಕ, (Suplimentary)ಸಂಪುಟ–೧೬, ತುಮಕೂರು ಜಿಲ್ಲೆಯ ಶಾಸನಗಳು, ಮೈಸೂರು ಸರ್ಕಾರ, ಕೇಂದ್ರ ಮುದ್ರಣಾಲಯ, ಬೆಂಗಳೂರು.

೩೫. ಶಿವತಾರಕ್ ಕೆ.ಬಿ., ೨೦೦೧; ಕರ್ನಾಟಕ ಪುರಾತತ್ವ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೬. ಸುಭಾಷ ಪಾಳೇಕರ್, ಶಂಕರಣ್ಣ ದೊಡ್ಡಣ್ಣವರ; ೨೦೧೦; ನೈಸರ್ಗಿಕ ಕೃಷಿ, ಕೀರ್ತಿ ಪ್ರಕಾಶನ, ಗದಗ.

೩೭. ಸೂರ್ಯನಾಥ ಯು. ಕಾಮತ್, ೧೯೯೬; ಕರ್ನಾಟಕ ರಾಜ್ಯ ಗ್ಯಾಜೆಟಿಯರ್, ಭಾಗ–೧, ಪರಿಶ್ರೀ, ಪ್ರಿಂಟರ್ಸ್, ಬೆಂಗಳೂರು.

೩೮. ಸಂಗಪ್ಪ ಚನ್ನಪ್ಪ ಕುಬಸದ, ೧೯೮೨; ನೀರಾವರಿ, ಆನಂದ ಪಬ್ಲಿಕೇಷನ್ಸ್, ಧಾರವಾಡ.

೩೯. ಸಂಪದ್ಗಿರಿರಾವ್ ಕೆ. (ಸಂ), ೨೦೦೬; ಕರ್ನಾಟಕ ಪರಂಪರೆ (ಪ್ರಾಗೈತಿಹಾಸಿಕ ಕಾಲದಿಂದ ವಿಜಯನಗರ ಸಾಮ್ರಾಜ್ಯ ಕಾಲದವರೆಗೆ), ಸಂಪುಟ–೧, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

**ಅಪ್ರಕಟಿತ ಸಂಶೋಧನಾ ಪ್ರಬಂಧಗಳು**

೦೧. ಆನಂದ್‌ಕುಮಾರ್ ಡಿ.ಎನ್., ೨೦೦೮; ಮಂಡ್ಯ ಜಿಲ್ಲೆಯ ಕೆರೆ ನೀರಾವರಿ ಪದ್ಧತಿ, ಒಂದು ಚಾರಿತ್ರಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೦೨. ಉಮಾದೇವಿ ಮ. ಪಂಚಿನಮನಿ, ೨೦೦೯; ಜಮಖಂಡಿಯ ಕೆರೆಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಪತ್ರಿಕೆ ಮತ್ತು ವರದಿಗಳು**

೦೧. ಪ್ರಜಾವಾಣಿ, ವಾರಪತ್ರಿಕೆ, ೨೦೧೦, ಜೂನ್.

೦೨. ಸ್ಪರ್ಧಾ ಸ್ಫೂರ್ತಿ, ತಿಂಗಳ ನಿಯತಕಾಲಿಕೆ, ೨೦೧೦, ಜನವರಿ.

೦೩. ಸಣ್ಣ ನೀರಾವರಿ ಇಲಾಖೆಯ ವರದಿ, ತುರುವೇಕೆರೆ (ತಾ), ತುರುವೇಕೆರೆ.

೦೪. ಸಹಾಯಕ ಕೃಷಿ ಇಲಾಖೆಯ ವರದಿ, ತುರುವೇಕೆರೆ (ತಾ), ತುರುವೇಕೆರೆ.

**ಆಂಗ್ಲಭಾಷೆಯ ಪುಸ್ತಕಗಳು:**

01. Abishankar, 1969; Tumukur Gazetteer, Govt. of Karnataka, Bangalore.

02. Buchanan, 1807; A Jurny form Madars True the Countries of Mysore, Canara and Malabar, Vol.III, Londan.

03. Dikshit G.S., Kuppaswamy G.R., Mohana Krishna S.K., 1993, Irrigation in Karnataka A Historical Survey, Bangalore.

04. Hayavadana Rao C., 1984; Mysore Gazetteer, Delhi, B.R. Publishing, Corporation.

05. Krishnamacharlu, C.R.Ed. 1986, Bombay-Karnataka, Inscriptions, Vol.XI, The Director General General, Archaeological Survey of India.

06. Suryanath U. Kamath, 1988; Mysore Gazetteer, Karnataka Gazetter Department, Bangalore.

07. Thomus, 1982; Epigraphia Indica, Vol. XIV, (1917-18) The Directors General, Archaeological Survey of India, Janpath, New Delhi.

ಪದಕೋಶ

೦೧. ಅಮಾನಿಕ ಕೆರೆ – ಇಲಾಖೆ ಅಧಿಕಾರಿಗಳ ನೇರ ಉಸ್ತುವಾರಿಯಲ್ಲಿ ಇರುವ ಕೆರೆ, ಭೂಮಿ ಅಥವಾ ಇತರೆ ಕಂದಾಯ ಮೂಲ

೦೨. ಆಯಕಟ್ಟು – ನೀರಾವರಿ ಸೌಲಭ್ಯವನ್ನು ಹೊಂದಿರುವ ಕೃಷಿ ಭೂಮಿ, ಜಮೀನು, ಗದ್ದೆ.

೦೩. ಏರಿ – ಕೆರೆ ಕೆರೆಯ ಕಟ್ಟೆ.

೦೪. ಕೂರಿಗೆ – ಹೊಲಗಳಲ್ಲಿ ಬೀಜ ಬಿತ್ತಲು ಬಳಸುವ ಉಪಕರಣ.

೦೫. ಕೆರೆ, ಕಟ್ಟೆ, ಕುಂಟೆ, ಕೊಳ-- ಏರಿ ಹಾಕಿ ನೀರು ನಿಲ್ಲಿಸಿದ ಜಲಾಶಯ.

೦೬. ಕೋಡಿ – ಕೆರೆ ಕಟ್ಟೆಗಳ ಹೆಚ್ಚು ನೀರು ಹರಿದು ಹೋಗಲು ಮಾಡಿದ ದಾರಿ.

೦೭. ಖುಷ್ಕಿ – ಮಳೆ ನೀರಿನಿಂದ ಮಾಡುವ ಬೇಸಾಯ.

೦೮. ಖಂಡುಗ – ಭೂಮಿಯ ಅಳತೆ : ೧೦ ಸಾವಿರ ಚದರ ಗಜ ಗದ್ದೆ ಹಾಗೂ ತೋಟ ಮತ್ತು ೬೪ ಚದರ ಗಜ ಒಣಭೂಮಿ : ಧಾನ್ಯದ ಅಳತೆ : ೪ ಬುಷಲ್ ಅಥವಾ ೧೨-೮ ಪಿಂಟ್‌ಗಳು.

೦೯. ಗದ್ದೆ – ತರಿ ಜಮೀನು; ಭತ್ತ; ಕಬ್ಬು; ನೀರಾವರಿ ಪೈರುಗಳನ್ನು ಬೆಳೆಯುವ ಭೂಮಿ.

೧೦. ಚಕ್ಕಡಿ – ಒಂದು ಎತ್ತಿನ ಗಾಡಿ.

೧೧. ತರಿ – ನೀರಾವರಿ ಭೂಮಿ ; ಗದ್ದೆ.

೧೨. ತೂಬು – ನೀರನ್ನು ಕೆರೆಯಿಂದ ಹಾಯಿಸುವ ಕೆರೆಯ ಭಾಗ.

೧೩. ನೀರ್ಗಂಟಿ – ಕೆರೆ ನೀರು ಸರಬರಾಜು ವ್ಯವಸ್ಥೆಯ ನಿರ್ಮಾಣ ಗ್ರಾಮಸೇವಕ.

೧೪. ಪಟ್ಟಣಸ್ವಾಮಿ – ಶೆಟ್ಟಿಗೆ ಎರಡನೆಯವನಾದ ನಗರ ಪ್ರಮುಖನಿಗೆ ನೀಡಿದ ಬಿರುದು, ಶೆಟ್ಟಿ ನಗರಾಧ್ಯಕ್ಷನಾದರೆ ಪಟ್ಟಣಶೆಟ್ಟಿ, ಅಲ್ದರಮನ್. (ದ್ವಿತೀಯ ಪ್ರಮುಖ)

೧೫. ವಿಲೇವಾರಿ – ಕೆರೆಯಲ್ಲಿ ಮೀನು ಹಿಡಿಯುವ ಗುತ್ತಿಗೆಯಿಂದ ಬಂದ ಹಣ.

೧೬. ಸಮುದ್ರ, ಸರೋವರ – ವಿಶಾಲ ನೀರಿನ ಹರಿವನಿಂದ ಕೂಡಿದ ಕೆರೆ.

## ವಕ್ತೃಗಳ ವಿವರ

| ಕ್ರ.ಸಂ. | ಹೆಸರು | ವಯಸ್ಸು | ಜಾತಿ | ವೃತ್ತಿ | ಊರು |
|---|---|---|---|---|---|
| ೧. | ರಂಗಪ್ಪ | ೫೮ | ಒಕ್ಕಲಿಗ | ರೈಸ್‌ಮಿಲ್ | ತಾವರೆಕೆರೆ (ತುರುವೇಕೆರೆ) |
| ೨. | ಆನಂದಪ್ಪ ಮತ್ತು ನಾಗಸಂದ್ರದ ಗ್ರಾಮಸ್ಥರು | ೬೦ | ಲಿಂಗಾಯಿತ | ಪ್ರಾವಿಜನ್ ಸ್ಟೋರ್ | ಮಾಯಸಂದ್ರ |
| ೩. | ಜಗದೀಶ್ | ೫೫ | ಲಿಂಗಾಯಿತ | ಗಂಗಾಧರೇಶ್ವರ ದೇವಸ್ಥಾನದ ಅರ್ಚಕರು | ಆನೆಕೆರೆ (ಮಲ್ಲಾಘಟ್ಟ) |
| ೪. | ರಮೇಶ್ ಕೆ. | ೫೦ | ಲಿಂಗಾಯಿತ | ವ್ಯವಸಾಯ | ಸಂಪಿಗೆ |
| ೫. | ಮಲ್ಲಿಕಾರ್ಜುನಯ್ಯ | ೬೨ | ಆಚಾರ್ಯ | ಶಿವದೇವಾಲಯದ ಅರ್ಚಕರು | ಜಡೆಯ |
| ೬. | ಪುಟ್ಟಸಾಮಣ್ಣ | ೪೫ | ಒಕ್ಕಲಿಗ | ವ್ಯವಸಾಯ | ಕಡಸೂರು |
| ೭. | ಶಿವಣ್ಣ | ೬೫ | ಲಿಂಗಾಯಿತ | ವ್ಯವಸಾಯ | ತಂಡಗ |
| ೮. | ಪ್ರಹ್ಲಾದ | ೪೫ | ಬ್ರಾಹ್ಮಣ | ವ್ಯವಸಾಯ | ಕೊಂಡಜ್ಜಿ |
| ೯. | ಮಲ್ಲಿಕಾರ್ಜುನ ಸ್ವಾಮಿ | ೫೦ | ಲಿಂಗಾಯಿತ | ರುದ್ರೇಶ್ವರ ದೇವಸ್ಥಾನದ ಅರ್ಚಕರು | ಸೂಳೆಕೆರೆ |
| ೧೦. | ರಾಜಣ್ಣ | ೫೨ | ವೈಷ್ಣವ | ಚನ್ನಕೇಶವ ದೇವಸ್ಥಾನದ ಅರ್ಚಕರು | ಸೂಳೆಕೆರೆ |
| ೧೧. | ಮಾಳೆ ಕೃಷ್ಣಪ್ಪ | ೬೦ | ಒಕ್ಕಲಿಗ | ವ್ಯವಸಾಯ | ಮಾವಿನಕೆರೆ |
| ೧೨. | ಹೇಮಣ್ಣ | ೫೭ | ಆಚಾರ್ಯ | ಪಂಡಿತರು | ಕಣತೂರು |
| ೧೩. | ಮಹಾಲಿಂಗಯ್ಯ | ೬೮ | ಲಿಂಗಾಯಿತ | ವ್ಯವಸಾಯ | ನೀರಗುಂದ |

ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪವಿಭಾಗ ಮತ್ತು ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆ, ತುರುವೇಕೆರೆ

ತುರುವೇಕೆರೆ ತಾಲೂಕಿನ ೨೫ ಹೆಕ್ಟೇರ್‌ಗಿಂತ ಮೇಲ್ಪಟ್ಟ ಜಲವೃತ್ತ ಪ್ರದೇಶ ಹೊಂದಿರುವ ಕೆರೆಗಳ ವಿವರ

| ಗ್ರಾಮಗಳ ಹೆಸರು | ಕೆರೆಗಳ ಹೆಸರು | ಜಲ ವಿಸ್ತೀರ್ಣ (ಹೆ) | ಅಚ್ಚುಕಟ್ಟು ಪ್ರದೇಶ (ಹೆ) |
|---|---|---|---|
| ಅಮ್ಮಸಂದ್ರ | ಅಮ್ಮಸಂದ್ರ ಕೆರೆ | ೨೭.೦೦ | ೪೪ |
| ಕಣತೂರು | ಕಣತೂರು ಕೆರೆ | ೩೫.೯೧ | ೧೬೩ |
| ಕಣಕೂರು | ಕಣಕೂರು ಕೆರೆ | ೨೭.೨೧ | – |
| ಕಪ್ಪೂರು | ಕಪ್ಪೂರು ಕೆರೆ | ೩೮.೪೦ | ೨೮.೮೧ |
| ಕಾಮನಹಳ್ಳಿ | ಕಾಮನಹಳ್ಳಿ | ೩೮.೪೦ | ೯.೨೦ |
| ಕುಣಿಕೇನಹಳ್ಳಿ | ಕುಣಿಕೇನಹಳ್ಳಿ ಕೆರೆ | ೩೪.೦೦ | ೩೪.೦೦ |
| ಕುರುಬರಹಳ್ಳಿ | ಕುರುಬರಹಳ್ಳಿ ಕೆರೆ, ಕೊಪ್ಪಕೆರೆ | ೨೮.೦೦ | – |
| ಕೊಪ್ಪ | ಕೊಪ್ಪಕೆರೆ (ಕುಡತನಹಳ್ಳಿ) | ೭೦.೦೦ | ೨೬.೭೨ |
| ಕೊಂಡಜ್ಜಿ | ಕೊಂಡಜ್ಜಿ ಕೆರೆ | ೨೬.೨೦ | ೮೫.೭೫ |
| ಗೊಟ್ಟಿಕೆರೆ | ಗೊಟ್ಟಿಕೆರೆ ಕೆರೆ | ೧೬೫ | ೬೫.೭೪ |
| ಜಡೆಯ | ಜಡೆಯ ಕೆರೆ | ೪೬.೦೦ | ೪೯ |
| ತುರುವೇಕೆರೆ | ತುರುವೇಕೆರೆಯ ಕೆರೆ | ೨೭೪ | ೨೮೫ |
| ತುಯ್ಯಲಹಳ್ಳಿ | ತುಯಲಹಳ್ಳಿ ಕೆರೆ | ೧೦೮ | ೮೦ |
| ತಂಡಗ | ತಂಡಗ ಕೆರೆ | ೮೦.೫ | ೮೬ |
| ದುಮ್ಮೇನಹಳ್ಳಿ | ದುಮ್ಮೇಸಹಳ್ಳಿ ಕೆರೆ | ೩೮.೪೦ | ೧೭.೪೩ |
| ದೊಡ್ಡ ಮಲ್ಲಿಗೆರೆ | ದೊಡ್ಡ ಮಲ್ಲಿಗೆರೆ ಕೆರೆ | ೪೪.೬೮ | ೨೨.೪೦ |
| ದೊಡ್ಡ ಶೆಟ್ಟಿಕೆರೆ | ದೊಡ್ಡ ಶೆಟ್ಟಿಕೆರೆ ಕೆರೆ | ೩೦.೦೦ | ೧೧.೭೯ |
| ದೊಡ್ಡ ಮಲ್ಲಿಗೆರೆ | ದೊಡ್ಡ ಮಲ್ಲಿಗೆರೆ, ಗೊಲ್ಲದ ಹಟ್ಟಿಕೆರೆ | ೪೯.೨೦ | ೨೨.೪೦ |
| ನಾಗಲಾಪುರ | ನಾಗಲಾಪುರ ಕೆರೆ | ೭೯ | ೧೧೦ |
| ಮಲದೇವನಹಳ್ಳಿ | ಮಲದೇವನಹಳ್ಳಿ ಕೆರೆ | ೨೮.೧೩ | ೨೮.೦೦ |
| ಮಲ್ಲಾಘಟ್ಟ | ಮಲ್ಲಾಘಟ್ಟ (ಅಮಾನಿಕೆರೆ) | ೬೩೦ | ೨೮೫ |
| ಮಾಯಸಂದ್ರ | ಮಾಯಸಂದ್ರ ಕೆರೆ | ೨೧೦ | ೨೪೯ |
| ಮಾಯಸಂದ್ರ ಬೊಮ್ಮೇನಹಳ್ಳಿ | ಬೊಮ್ಮೇನಹಳ್ಳಿ ಕೆರೆ | ೩೨ | ೪೨ |
| ಮುಗಳೂರು | ಮುಗಳೂರು ಕೆರೆ | ೨೯.೬೦ | ೨೫.೬೫ |
| ರಾಮಸಾಗರ | ರಾಮಸಾಗರ ಕೆರೆ | ೩೨.೪೦ | ೨೮.೬೭ |
| ವಡವನ ಘಟ್ಟ | ವಡವನ ಘಟ್ಟ ಕೆರೆ | ೩೯ | ೫೫ |
| ವೀರಸಾಗರ | ವೀರಸಾಗರ ಕೆರೆ | ೮೦.೫ | ೮೬ |
| ಸಾರಿಗೆ ಹಳ್ಳಿ | ಸಾರಿಗ ಹಳ್ಳಿ ಕೆರೆ | ೪೨೦ | ೨೮೦ |
| ಸೂಳೆಕೆರೆ | ಸೂಳೆಕೆರೆ ಕೆರೆ | ೭೦ | ೪೮ |
| ಸಂಪಿಗೆ | ಸಂಪಿಗೆ ಕೆರೆ | ೨೫೨.೪೦ | ೯೪ |
| ಒತ್ತಲಕೊಪ್ಪ | ಒತ್ತಲಕೊಪ್ಪ ಕೆರೆ | ೪೬.೪೦ | ೨೬.೭೨ |
| ಹೊಸಹಳ್ಳಿ | ಹೊಸಹಳ್ಳಿ ಕೆರೆ | ೬೦.೪೦ | – |
| ಹೊಸಹಳ್ಳಿ | ರಾಚನಾಯಕನ ಕೆರೆ | ೬೦.೧ | ೪೮.೭೫ |

## ತುರುವೇಕೆರೆ ತಾಲ್ಲೂಕಿನ ೧೦ ರಿಂದ ೨೫ ಹೆಕ್ಟೇರ್‌ವರೆಗಿನ ಜಲಪ್ರದೇಶ ಹೊಂದಿರುವ ಕೆರೆಗಳ ವಿವರ

| ಕ್ರ.ಸಂ. | ಗ್ರಾಮಗಳ ಹೆಸರು | ಕೆರೆಗಳ ಹೆಸರು | ಜಲ ವಿಸ್ತೀರ್ಣ (ಹೆ) | ಅಚ್ಚುಕಟ್ಟು ಪ್ರದೇಶ (ಹೆ) |
|---|---|---|---|---|
| ೧. | ಅರಳಹಳ್ಳಿ | ಅರಳಹಳ್ಳಿ ಕೆರೆ | ೨೦.೧೦ | ೮.೦೦ |
| ೨. | ಅನಡಗು | ಅನಡಗು ಕೆರೆ | ೧೮.೪೦ | ೭.೯೧ |
| ೩. | ಅರಳಗೆರೆ | ಅರಳಗೆರೆ ಕೆರೆ | ೧೧.೬೦ | ೮.೬೭ |
| ೪. | ಅಕ್ಕಲಸಂದ್ರ | ಅಕ್ಕಲಸಂದ್ರ ಕೆರೆ | ೧೮.೦೦ | ೧೭.೨೦ |
| ೫. | ಆಲದಹಳ್ಳಿ | ಆಲದಹಳ್ಳಿ ಕೆರೆ | ೨೧.೦೦ | ೧೭.೦೦ |
| ೬. | ಕಳ್ಳನಗತ್ತಿ ಹಳ್ಳಿ | ಕಳ್ಳನಗತ್ತಿ ಹಳ್ಳಿ ಕೆರೆ | ೧೬.೪೦ | ೯.೨೫ |
| ೭. | ಕಳ್ಳನಹಳ್ಳಿ | ಕಳ್ಳನಹಳ್ಳಿ ಕೆರೆ | ೧೪.೦೦ | ೧೪.೦೦ |
| ೮. | ಕೋಣಾಲ | ಕೋಣಾಲ ಕೆರೆ | ೨೨.೨೮ | ೪೭ |
| ೯. | ಗೋಣಿ ತುಮಕೂರು | ಗೋಣಿ ತುಮಕೂರು ಕೆರೆ | ೧೨.೫೦ | ೯.೭೯ |
| ೧೦. | ಗೋಣಿ ತುಮಕೂರು | ಗೋಣಿ ತುಮಕೂರು ಕೆರೆ (ಊರ ಮುಂದಿನ ಕೆರೆ) | ೨೦.೦೦ | ೧೪.೪ |
| ೧೧. | ಗುರುಮಟಕಲ್ಲು | ಗುರುಮಟಕಲ್ಲು ಕೆರೆ | ೨೨.೦೦ | – |
| ೧೨. | ಚಿಕ್ಕ ಶೆಟ್ಟಿಕೆರೆ | ಚಿಕ್ಕ ಶೆಟ್ಟಿಕೆರೆ ಕೆರೆ | ೧೮.೦೦ | ೧೪.೪೭ |
| ೧೩. | ಜೆಂಡೂರು | ಜೆಂಡೂರು ಕೆರೆ | ೧೮.೦೦ | ೩೦.೮೦ |
| ೧೪. | ತುರುವನಕೋಟೆ | ತುರುವನಕೋಟೆ ಕೆರೆ | ೧೬.೪೦ | ೧೧.೦೨ |
| ೧೫. | ದಣನಾಯಕನ ಪುರ | ದಣನಾಯಕನ ಪುರ ಕೆರೆ | ೨೦.೦೦ | ೧೪.೩೦ |
| ೧೬. | ದಬ್ಬೇಘಟ್ಟ | ದಬ್ಬೇಘಟ್ಟ ಕೆರೆ | ೨೦.೪೦ | ೩೧.೫೯ |
| ೧೭. | ದಾಸಿಹಳ್ಳಿ | ದಾಸಿಹಳ್ಳಿ ಕೆರೆ | ೧೦.೮೦ | – |
| ೧೮. | ದೊಡ್ಡ ಶೆಟ್ಟಿ ಕೆರೆ | ದೊಡ್ಡ ಶೆಟ್ಟಿ ಕೆರೆ ಕೆರೆ | ೧೨.೦೦ | ೧೧.೭೯ |
| ೧೯. | ದೊಡ್ಡ ಬೀರನ ಕೆರೆ | ದೊಡ್ಡ ಬೀರನ ಕೆರೆ ಕೆರೆ | ೧೭.೨೦ | ೧೮.೦೮ |
| ೨೦. | ನೀರುಗುಂದ | ನೀರುಗುಂದ ಕೆರೆ | ೧೨.೦೦ | ೫.೧೭ |
| ೨೧. | ನೇರಲಕಟ್ಟೆ | ನೇರಲಕಟ್ಟೆ ಕೆರೆ | ೧೫.೧೦ | ೨೨.೪೦ |
| ೨೨. | ಬಡಗರಹಳ್ಳಿ | ಬಡಗರಹಳ್ಳಿ ಕೆರೆ | ೧೮.೫೦ | ೧೭.೫೯ |
| ೨೩. | ಬೀಚನಹಳ್ಳಿ | ಬೀಚನಹಳ್ಳಿ ಕೆರೆ | ೨೫.೦೦ | ೨೪.೦೮ |
| ೨೪. | ಬೊಮ್ಮೇನಹಳ್ಳಿ (ಬಾಣಸಂದ್ರ) | ಬೊಮ್ಮೇನಹಳ್ಳಿ ಕೆರೆ | ೨೦.೦೦ | ೧೨.೭೫ |
| ೨೫. | ಮಾವಿನಹಳ್ಳಿ | ಮಾವಿನಹಳ್ಳಿ ಕೆರೆ | ೧೭.೦೦ | ೧೯.೬೩ |
| ೨೬. | ಮಾವಿನಕೆರೆ | ಮಾವಿನಕೆರೆ ಕೆರೆ | ೨೦.೦೦ | ೧೮.೦೦ |
| ೨೭. | ಮುದ್ದನಹಳ್ಳಿ | ಮುದ್ದನಹಳ್ಳಿ ಕೆರೆ | ೧೨.೦೦ | ೭.೧೫ |
| ೨೮. | ಯರದಹಳ್ಳಿ | ಯರದಹಳ್ಳಿ ಕೆರೆ | ೧೨.೬೦ | – |
| ೨೯. | ವರಹಾಸಂದ್ರ | ವರಹಾಸಂದ್ರ ಕೆರೆ | ೧೪.೪೦ | ೧೦.೭೯ |
| ೩೦. | ವಿಠಲಾಪುರ | ವಿಠಲಾಪುರ ಕೆರೆ | ೧೦.೪೦ | ೨೦.೦೮ |
| ೩೧. | ಸೀಗೆಹಳ್ಳಿ | ಸೀಗೆಹಳ್ಳಿ ಕೆರೆ | ೨೨.೦೦ | – |
| ೩೨. | ಸಂಪಿಗೆ ಹೊಸಹಳ್ಳಿ | ಸಂಪಿಗೆ ಹೊಸಹಳ್ಳಿ ಕೆರೆ | ೧೨.೦೦ | ೪೦.೪೦ |
| ೩೩. | ಹೆಸರಹಳ್ಳಿ | ಹೆಸರಹಳ್ಳಿ ಕೆರೆ | ೨೦.೦೦ | – |
| ೩೪. | ಹೊಸಹಳ್ಳಿ. ಕೆ. | ಹೊಸಹಳ್ಳಿ ಕೆ. (ಹತ್ತಿಕಟ್ಟೆ) | ೧೫.೦೦ | ೬.೬೦ |
| ೩೫. | ಹಂಜಿಹಳ್ಳಿ | ಹಂಜಿಹಳ್ಳಿ ಕೆರೆ | ೨೪.೦೦ | ೧೮.೦೦ |

ತುರುವೇಕೆರೆ ತಾಲೂಕಿನ ೧೦ ಹೆಕ್ಟೇರ್‌ವರೆಗಿನ ಜಲಪ್ರದೇಶ ಹೊಂದಿರುವ ಸಣ್ಣ ಕೆರೆಗಳ ವಿವರ

| ಕ್ರ.ಸಂ. | ಗ್ರಾಮಗಳ ಹೆಸರು | ಕೆರೆಗಳ ಹೆಸರು | ಜಲ ವಿಸ್ತೀರ್ಣ (ಹೆ) | ಅಚ್ಚುಕಟ್ಟು ಪ್ರದೇಶ (ಹೆ) |
|---|---|---|---|---|
| ೧. | ಅರಕೆರೆ | ಊರ ಮುಂದಿನ ಕಟ್ಟೆ | ೧.೦೦ | – |
| ೨. | ಅಕ್ಕಳಸಂದ್ರ | ಅಕ್ಕಳಸಂದ್ರ ಕೆರೆ | ೧೦.೨೦ | – |
| ೩. | ಅಬುಕನ ಹಳ್ಳಿ | ಅಬುಕನ ಹಳ್ಳಿ ಕೆರೆ | ೮.೬೦ | – |
| ೪. | ಅಜ್ಜೇನಹಳ್ಳಿ | ಅಜ್ಜೇನಹಳ್ಳಿ ಕೆರೆ | ೨.೦೦ | ೩.೮೫ |
| ೫. | ಅಜ್ಜೇನಹಳ್ಳಿ | ಅಜ್ಜೇನಹಳ್ಳಿ ದೇವರ ಕೆರೆ | ೩.೨೦ | ೨೫.೬ |
| ೬. | ಆನೆಮಳೆ ಪಾಳ್ಯ | ಆನೆಮಳೆ ಪಾಳ್ಯ ಕೆರೆ | ೬.೦೦ | – |
| ೭. | ಅಂಜಿ ಹಳ್ಳಿ | ಅಂಜಿ ಹಳ್ಳಿ ಕೆರೆ | ೧೦.೦೦ | ೮.೦೮ |
| ೮. | ಅಂಬಲದೇವನಹಳ್ಳಿ | ಅಂಬಲದೇವನಹಳ್ಳಿ ಕೆರೆ | ೬.೮೦ | ೫.೦೮ |
| ೯. | ಇಟ್ಟಿಗೆ ಹಳ್ಳಿ | ಹೊಸಕೆರೆ | ೯.೭೨ | ೨೪.೨೯ |
| ೧೦. | ಒಣಕೆರೆ | ಒಣಕೆರೆ | ೬.೦೦ | – |
| ೧೧. | ಕಲ್ಕೆರೆ | ಕಲ್ಕೆರೆ ಅಕ್ಕವ್ವ ಕಟ್ಟೆ | ೨.೦೦ | – |
| ೧೨. | ಕಳ್ಳನ ಕೆರೆ | ಕಳ್ಳನ ಕೆರೆ ಕೆರೆ | ೧.೨೦ | ೧೪.೪ |
| ೧೩. | ಕುಣಿಕೇನಹಳ್ಳಿ | ಕುಣಿಕೇನಹಳ್ಳಿ ಕೆರೆ | ೪.೪೧ | ೩೪ |
| ೧೪. | ಕುರುಬರ ಹೊಸಹಳ್ಳಿ | ಕುರುಬರ ಹೊಸಹಳ್ಳಿ ಕೆರೆ | ೪.೮೦ | ೨೬.೪೬ |
| ೧೫. | ಕೊಡಗಿಹಳ್ಳಿ | ಕೊಡಗಿಹಳ್ಳಿ ಕೆರೆ | ೨.೦೦ | – |
| ೧೬. | ಗವಿನಾಥಪುರ | ಗವಿನಾಥಪುರ ಕೆರೆ | ೬.೮೫ | ೬.೪ |
| ೧೭. | ಗುರುಲಾಪುರ | ಗುರುಲಾಪುರ ಕೆರೆ | ೫.೨೦ | ೩೨.೫ |
| ೧೮. | ಗೋಣಿ ತುಮಕೂರು | ಗೋಣಿ ತುಮಕೂರು ಕೆರೆ | ೪.೦೦ | ೯.೭೯ |
| ೧೯. | ಚಕವಳ್ಳಿ ಪಾಳ್ಯ | ಚಕವಳ್ಳಿ ಪಾಳ್ಯ ಕಟ್ಟೆ | ೨.೮೦ | – |
| ೨೦. | ಚನ್ನಮ್ಮನ ಹಳ್ಳಿ | ಚನ್ನಮ್ಮನ ಹಳ್ಳಿ ಕೆರೆ | ೩.೦೦ | – |
| ೨೧. | ತಾಳೇಕೆರೆ | ತಾಳೇಕೆರೆ ಕೆರೆ | ೪.೦೦ | ೬.೨೫ |
| ೨೨. | ದೊಡ್ಡ ಬೀರನಕೆರೆ | ಐಯ್ಯನ ಕೆರೆ | ೭.೦೦ | ೧೦.೭೫ |
| ೨೩. | ದೊಡ್ಡ ಹಟ್ಟಿ | ಹೊಸೂರು ಕೆರೆ | ೬.೦೦ | – |
| ೨೪. | ನಾಗಲಾಪುರ | ನಾಗಲಾಪುರ ಚಿಕ್ಕಕೆರೆ | ೮.೦೦ | ೭.೫ |
| ೨೫. | ನಂಗೀಹಳ್ಳಿ | ಹೊಸಕೆರೆ | ೪.೦೪ | ೨೮.೩೪ |
| ೨೬. | ಬಲಿ ಮಾದಿಹಳ್ಳಿ | ಬಲಿ ಮಾದಿಹಳ್ಳಿ ಹೊಸಕೆರೆ | ೮.೪೨ | ೩೪ |
| ೨೭. | ಬಳ್ಳೇ ಕಟ್ಟೆ | ಬಳ್ಳೇ ಕಟ್ಟೆ ಕೆರೆ | ೩.೦೦ | ೨೦ |
| ೨೮. | ಬಾಣಸಂದ್ರ | ಬಾಣಸಂದ್ರ ದೊಡ್ಡನಕಟ್ಟೆ | ೩.೨೦ | ೧೩.೨೬ |
| ೨೯. | ಬೀಚನಹಳ್ಳಿ | ಬೀಚನಹಳ್ಳಿ ಕೆರೆ | ೪.೦೮ | ೨೫.೬ |
| ೩೦. | ಬೇವಿನಹಳ್ಳಿ ಕೆ. | ಹೊಸಕಟ್ಟೆ ಕೆರೆ | ೪.೦೦ | – |
| ೩೧. | ಬೈತರ ಹೊಸಹಳ್ಳಿ | ಬೈತರ ಹೊಸಹಳ್ಳಿ ಕೆರೆ | ೪.೦೦ | ೨೬.೪೬ |
| ೩೨. | ಮಾವಿನಹಳ್ಳಿ ಕೆ. | ಮಾವಿನಹಳ್ಳಿ ಕೆ. ಕಟ್ಟೆ | ೧.೦೦ | ೧೧.೬೩ |
| ೩೩. | ಮಣಿ ಚಂಡೂರು | ಹೊಸಕೆರೆ | ೯.೯೦ | ೩೮.೮ |
| ೩೪. | ಮುದ್ದಿಗೆರೆ | ಮುದ್ದಿಗೆರೆ ಚಿಕ್ಕೆರೆ | ೨.೦೦ | – |
| ೩೫. | ಮುನಿಯೂರು | ಮುನಿಯೂರು ಕಲ್ಯಾಣಿ ಕೆರೆ | ೪.೦೦ | – |
| ೩೬. | ಮುದ್ದೇನಹಳ್ಳಿ | ಮುದ್ದೇನಹಳ್ಳಿ ಐಯ್ಯನಕೆರೆ | ೭.೦೦ | ೭.೭೪ |
| ೩೭. | ಮಂಜರಿಪುರ | ಮಂಜರಿಪುರ ಕೆರೆ | ೬.೦೦ | ೨೮.೪ |
| ೩೮. | ವರಹಾಸಂದ್ರ | ಬೈತರ ಹೊಸಹಳ್ಳಿ ಕಡಿವಿಕಟ್ಟೆ | ೪.೮೦ | – |
| ೩೯. | ವಿಠಲಾಪುರ | ವಿಠಲಾಪುರ ಕೊಪ್ಪ ಕೆರೆ | ೮.೮೦ | ೨೦.೨೭ |
| ೪೦. | ಶೆಟ್ಟಿಹಳ್ಳಿ | ಶೆಟ್ಟಿಹಳ್ಳಿ ಕೆರೆ | ೬.೫೦ | ೭.೪೧ |

| ಕ್ರ.ಸಂ. | ಗ್ರಾಮಗಳ ಹೆಸರು | ಕೆರೆಗಳ ಹೆಸರು | ಜಲ ವಿಸ್ತೀರ್ಣ (ಹೆ) | ಅಚ್ಚುಕಟ್ಟು ಪ್ರದೇಶ (ಹೆ) |
|---|---|---|---|---|
| ೪೧. | ಶೆಟ್ಟಿಗೊಂಡನಹಳ್ಳಿ | ಶೆಟ್ಟಿಗೊಂಡನಹಳ್ಳಿ ಕೆರೆ | ೭.೨೦ | ೨೮.೦೮ |
| ೪೨. | ಸೂಡಮಾರ್ಗೇನಹಳ್ಳಿ | ಸೂಡಮಾರ್ಗೇನಹಳ್ಳಿ ಕೆರೆ | ೭.೮೦ | – |
| ೪೩. | ಸಂಪಿಗೆ ಹೊಸಹಳ್ಳಿ | ಹೊಸೂರುಕೆರೆ | ೩.೦೦ | ೧೮.೧ |
| ೪೪. | ಸುಂಗಲಾಪುರ | ಸುಂಗಲಾಪುರ ಕೆರೆ | ೨.೦೦ | ೫.೧ |
| ೪೫. | ಹಳ್ಳದ ಹೊಸಹಳ್ಳಿ | ಹಳ್ಳದ ಹೊಸಹಳ್ಳಿ ಕೆರೆ | ೬.೪೦ | ೫.೬೦ |
| ೪೬. | ಹುಲಿಕೆರೆ | ಹುಲಿಕೆರೆ ಕೆರೆ | ೪.೦೦ | ೧೪.೪ |
| ೪೭. | ಹುಲಿಕೆರೆ | ಹುಲಿಕೆರೆ ಕೆರೆ | ೫.೨೬ | ೧೪.೪ |
| ೪೮. | ಹುಲಿಸಂದ್ರ | ಹುಲಿಸಂದ್ರ ಕೆರೆ | ೬.೨೦ | ೯.೬ |
| ೪೯. | ಹೊನ್ನೇನ ಹಳ್ಳಿ | ಹೊನ್ನೇನ ಹಳ್ಳಿ ಕೆರೆ | ೮.೦೦ | ೨೩.೨ |
| ೫೦. | ಹೊಡ್ಡರಕಟ್ಟೆ | ಹೊಡ್ಡರಕಟ್ಟೆ ಕೆರೆ | ೪.೪೦ | ೧೪ |
| ೫೧. | ಹಂಡೆ ಹಳ್ಳಿ | ಹಂಡೆ ಹಳ್ಳಿ ಹೊಸಕೆರೆ | ೫.೩೪ | ೨೪.೨೯ |

## ಸಹಾಯಕ ಕೃಷಿ ಇಲಾಖೆ, ತುರುವೇಕೆರೆ

| ಕ್ರ.ಸಂ. | ಬೆಳೆಗಳು | ಗುರಿ ವಿಸ್ತೀರ್ಣ ಹೆಕ್ಟೇರುಗಳಲ್ಲಿ | | | ಪ್ರಗತಿ ವಿಸ್ತೀರ್ಣ ಹೆಕ್ಟೇರುಗಳಲ್ಲಿ | | |
|---|---|---|---|---|---|---|---|
| | | ಖುಷ್ಕಿ | ನೀರಾವರಿ (ತರಿ) | ಒಟ್ಟು | ಖುಷ್ಕಿ | ನೀರಾವರಿ (ತರಿ) | ಒಟ್ಟು |
| ಅ. | ಏಕದಳ ಧಾನ್ಯಗಳು | | | | | | |
| | ಭತ್ತ | ೨೭೯ | ೨೦೩೧ | ೨೩೧೦ | ೦ | ೧೯೩೦ | ೧೯೩೦ |
| | ರಾಗಿ | ೧೮೯೯೯ | ೦ | ೧೮೯೯೯ | ೧೯೭೯೮ | ೦ | ೧೯೭೯೮ |
| | ಜೋಳ ಹೈಬ್ರೀಡ್ | ೭೩ | ೦ | ೭೩ | ೦ | ೦ | ೦ |
| | ಜೋಳ (ಸ್ಥಳೀಯ) | ೭೩ | ೦ | ೭೩ | ೪೯೯ | ೦ | ೪೯೯ |
| | ಹೈಬ್ರೀಡ್ ಮುಸುಕಿನ ಜೋಳ | ೦ | ೨೮ | ೨೮ | ೨೯೮ | ೦ | ೨೯೩ |
| | ಕಿರು ಧಾನ್ಯಗಳು | ೨೦೯ | ೦ | ೨೦೯ | ೨೦೧ | ೦ | ೨೦೧ |
| | ಒಟ್ಟು ಏಕದಳ | ೧೯೬೩೩ | ೨೦೫೯ | ೨೧೬೯೨ | ೨೦೭೯೧ | ೧೯೩೦ | ೨೨೭೨೧ |
| ಆ. | ದ್ವಿದಳ ಧಾನ್ಯಗಳು | | | | | | |
| | ತೊಗರಿ | ೧೩೪೪ | ೦ | ೧೩೪೪ | ೪೨೩ | ೦ | ೪೨೩ |
| | ಹುರುಳಿ | ೧೫೯೪ | ೦ | ೧೫೯೪ | ೧೫೯೦ | ೦ | ೧೫೯೦ |
| | ಉದ್ದು | ೧೬೧ | ೦ | ೧೬೧ | ೧೮೨ | ೦ | ೧೮೨ |
| | ಹೆಸರು | ೨೬೪ | ೦ | ೨೬೪ | ೫೩೧ | ೦ | ೫೩೧ |
| | ಅಲಸಂದೆ | ೪೩೮ | ೦ | ೪೩೮ | ೪೭೮ | ೦ | ೪೭೮ |
| | ಅವರೆ | ೨೩೧೮ | ೦ | ೨೩೧೮ | ೨೩೩೨ | ೦ | ೨೩೩೨ |
| | ಕಡಲೆ | ೦ | ೦ | ೦ | ೦ | ೦ | ೦ |
| | ಒಟ್ಟು ದ್ವಿದ್ವಳ | ೬೧೧೯ | ೦ | ೫೫೩೬ | ೫೫೩೬ | ೦ | ೫೫೩೬ |
| ಇ. | ಎಣ್ಣೆ ಕಾಳುಗಳು | | | | | | |
| | ನೆಲಗಡಲೆ | ೩೨ | ೦ | ೩೨ | ೦೩ | ೦ | ೦೩ |
| | ಎಳ್ಳು | ೧೯೩ | ೦ | ೧೯೩ | ೪೩ | ೦ | ೪೩ |
| | ಸೂರ್ಯಕಾಂತಿ | ೨೧೩ | ೦ | ೨೧೩ | ೦೫ | ೦ | ೦೫ |
| | ಹರಳು | ೩೫೫ | ೦ | ೩೫೫ | ೨೩೨ | ೦ | ೨೩೨ |
| | ಹುಚ್ಚೆಳ್ಳು | ೨೫೮ | ೦ | ೨೫೮ | ೨೫೧ | ೦ | ೨೫೧ |
| | ಸಾಸಿವೆ | ೯೫ | ೦ | ೯೫ | ೭೮ | ೦ | ೭೮ |
| | ಸೋಯಾ ಅವರೆ | ೭೯ | ೦ | ೭೯ | ೦ | ೦ | ೦ |
| | ಒಟ್ಟು ಎಣ್ಣೆಕಾಳು | ೧೨೧೫ | ೦ | ೧೨೧೫ | ೬೧೨ | ೦ | ೬೧೨ |
| | ವಾಣಿಜ್ಯ ಬೆಳೆ ಕಬ್ಬು | ೨.೦ | ೦ | ೨.೦ | ೦ | ೦ | ೦ |
| | ಎಲ್ಲಾ ಬೆಳೆಗಳು ಒಟ್ಟು | ೨೬೯೬೯ | ೨೦೫೯ | ೨೯೦೨೮ | ೨೬೯೩೯ | ೧೯೩೦ | ೨೮೮೬೯ |

## ೨೦೦೯-೧೦ನೇ ಸಾಲಿನ ಹಿಂಗಾರು ಹಂಗಾಮಿನ ಬೆಳೆ ವಿಸ್ತೀರ್ಣ

### ಗುರಿ ಮತ್ತು ಸಾಧನೆ

| ಕ್ರ.ಸಂ. | ಬೆಳೆಗಳು | ಗುರಿ ವಿಸ್ತೀರ್ಣ ಹೆಕ್ಟೇರುಗಳಲ್ಲಿ | | | ಪ್ರಗತಿ ವಿಸ್ತೀರ್ಣ ಹೆಕ್ಟೇರುಗಳಲ್ಲಿ | | |
|---|---|---|---|---|---|---|---|
| | | ನೀರಾವರಿ (ತರಿ) | ಖುಷ್ಕಿ | ಒಟ್ಟು | ನೀರಾವರಿ (ತರಿ) | ಖುಷ್ಕಿ | ಒಟ್ಟು |
| | ಭತ್ತ | ೧೮೦ | ೦ | ೧೮೦ | ೦ | ೦ | ೦ |
| | ರಾಗಿ | ೦ | ೦ | ೦ | ೦ | ೦ | ೦ |
| | ಹಿಂಗಾರಿನ ಜೋಳ | ೦ | ೧೬೫ | ೧೬೫ | ೦ | ೨೦ | ೨೦ |
| | ಮುಸುಕಿನ ಜೋಳ (ಮೇವು) | ೦ | ೦ | ೦ | ೨೦೦ | ೦ | ೨೦೦ |
| | ಮುಸುಕಿನ ಜೋಳ (ಧಾನ್ಯ) | ೩೨ | ೦ | ೩೨ | ೧೩ | ೦ | ೧೩ |
| | ಗೋಧಿ | ೦೧ | ೦ | ೦೧ | ೦ | ೦ | ೦ |
| | ಒಟ್ಟು ಏಕದಳ | ೨೧೩ | ೧೬೫ | ೩೭೮ | ೨೧೩ | ೨೦ | ೨೮೩ |
| | ಹುರುಳಿ | ೦ | ೦ | ೦ | ೦ | ೬೭೬ | ೬೭೬ |
| | ಕಡಲೆ | ೦ | ೩೪೪ | ೩೪೪ | ೦ | ೮೦ | ೮೦ |
| | ಅಲಸಂದೆ | ೦ | ೦ | ೦ | ೪೦ | ೦ | ೪೦ |
| | ಒಟ್ಟು ದ್ವಿದಳ | ೦ | ೩೪೪ | ೩೪೪ | ೪೦ | ೭೫೬ | ೭೯೬ |
| | ಒಟ್ಟು ಆಹಾರ ಧಾನ್ಯ | ೨೧೩ | ೫೦೯ | ೭೨೨ | ೨೫೩ | ೮೨೬ | ೧೦೭೯ |
| | ಸೂರ್ಯಕಾಂತಿ | ೧೦೦ | ೦ | ೧೦೦ | ೦ | ೦ | ೦ |
| | ಒಟ್ಟು ಎಣ್ಣೆಕಾಳು | ೧೦೦ | ೦ | ೧೦೦ | ೦ | ೦ | ೦ |
| | ಕಬ್ಬು | ೦ | ೦ | ೦ | ೧೫ | ೦ | ೧೫ |
| | ಹತ್ತಿ | ೦೨ | ೦ | ೦೨ | ೦ | ೦ | ೦ |
| | ಒಟ್ಟು ವಾಣಿಜ್ಯ ಬೆಳೆಗಳು | ೦೨ | ೦ | ೦೨ | ೧೫ | ೧೫ | ೧೫ |
| | ಎಲ್ಲಾ ಬೆಳೆಗಳು ಒಟ್ಟು | ೩೧೫ | ೫೦೯ | ೮೨೪ | ೨೬೮ | ೨೬೮ | ೧೦೯೪ |

## ೨೦೦೯–೧೦ನೇ ಸಾಲಿನ ಬೇಸಿಗೆ ಹಂಗಾಮಿನ ಬೆಳೆ ವಿಸ್ತೀರ್ಣ

### ಗುರಿ ಮತ್ತು ಸಾಧನೆ

| ಕ್ರ.ಸಂ. | ಬೆಳೆಗಳು | ಗುರಿ ವಿಸ್ತೀರ್ಣ ಹೆಕರೆಗಳಲ್ಲಿ | | | ಪ್ರಗತಿ ವಿಸ್ತೀರ್ಣ ಹೆಕೆರೆಗಳಲ್ಲಿ | | |
|---|---|---|---|---|---|---|---|
| | | ನೀರಾವರಿ (ತರಿ) | ಖುಷ್ಕಿ | ಒಟ್ಟು | ನೀರಾವರಿ (ತರಿ) | ಖುಷ್ಕಿ | ಒಟ್ಟು |
| ೧. | ಭತ್ತ | ೧೮೧೦ | – | ೧೮೧೦ | ೧೬೯೫ | – | ೧೬೯೫ |
| ೨. | ರಾಗಿ | ೧೨೯ | – | ೧೨೯ | ೪೧ | – | ೪೧ |
| ೩. | ಹಿಂಗಾರಿನ ಜೋಳ | – | – | – | – | – | – |
| ೪. | ಮುಸುಕಿನ ಜೋಳ (ಮೇವು) | – | – | – | ೭೨ | – | ೭೨ |
| ೫. | ಮುಸುಕಿನ ಜೋಳ (ಧಾನ್ಯ) | – | – | – | ೩ | – | ೩. |
| ೬. | ಗೋಧಿ | ೫೩. | – | ೫೩ | – | – | – |
| | ಒಟು ಏಕದಳ | ೧೯೯೨ | – | ೧೯೯೨ | ೧೮೧೧ | – | ೧೮೧೧ |
| ೧. | ಹುರುಳಿ | – | – | – | – | – | – |
| ೨. | ಕಡಲೆ | – | – | – | – | – | – |
| ೩. | ಅಲಸಂದೆ | ೧೪ | – | ೧೪ | ೨೯ | ೦ | ೨೯ |
| | ಒಟ್ಟು ದ್ವಿದಳ | ೧೪ | – | ೧೪ | ೨೯ | ೦ | ೨೯ |
| | ಒಟ್ಟು ಆಹಾರ ಧಾನ್ಯ | ೨೦೦೬ | – | ೨೦೦೬ | ೧೮೪೦ | ೦ | ೧೮೪೦ |
| ೧. | ಸೂರ್ಯಕಾಂತಿ | ೧೦೦ | – | ೧೦೦ | ೦ | ೦ | ೦ |
| ೨. | ನೆಲಗಡಲೆ | ೦ | – | ೦ | ೧೧ | ೦ | ೧೧ |
| | ಒಟ್ಟು ಎಣ್ಣೆಕಾಳು | ೧೦೦ | ೦ | ೧೦೦ | ೧೧ | ೦ | ೧೧ |
| ೧. | ಕಬ್ಬು | ೦ | ೦ | ೦ | ೧೨ | ೦ | ೧೨ |
| ೨. | ಹತ್ತಿ | ೦ | ೦ | ೦ | ೦ | ೦ | ೦ |
| | ಒಟ್ಟು ವಾಣಿಜ್ಯ ಬೆಳೆಗಳು | ೦ | ೦ | ೦ | ೧೨ | ೦ | ೧೨ |
| | ಎಲ್ಲಾ ಬೆಳೆಗಳು ಒಟ್ಟು | ೨೧೦೬ | | ೨೧೦೬ | ೧೮೬೩ | ೦ | ೧೮೬೩ |

# ಛಾಯಾ ಚಿತ್ರಗಳು



ವೀರಸಾಗರ ಕೆರೆ ಸಮೀಪದ ಕಲ್ಲಿನ ರಚನೆ.



ವಸತಿ ದಿಬ್ಬ, ವೀರಸಾಗರ ಕೆರೆ.



ಮಾಯಸಂದ್ರ ಕೆರೆ ಏರಿಯ ಕಟ್ಟುವಾಡ.



ಮಲ್ಲಾಘಟ್ಟ ಕೆರೆ ಏರಿಯ ಮೇಲ್ಭಾಗದ ಅಗಲ.



ಜಡೆಯಾ ಕೆರೆ ಏರಿ.



ಅಂಕುಡೊಂಕಾಗಿ ಇರುವ ಮಾವಿನ ಕೆರೆಯ ಏರಿ.



ಮಾಯಸಂದ್ರ ಕೆರೆಯ ತೂಬಿಗೆ ಇರಿಸಿರುವ ಸೇತುವೆ.



ಮಾಯಸಂದ್ರ ಕೆರೆಯ ತೂಬಿಗೆ ಕಬ್ಬಿಣದ ಸಲಾಕಿಗೆ ಬದಲು ಕಬ್ಬಿಣದ ಸರಪಣಿ ಅಳವಡಿಸಿರುವುದು.



ಮಲ್ಲಾಘಟ್ಟ ಕೆರೆಯ ತೂಬಿನ ರಚನೆ.



ಸಾರಿಗೆ ಹಳ್ಳಿ ಕೆರೆಯ ತೂಬು.



ತುಯಲ ಹಳ್ಳಿ ಕೆರೆಯ ತೂಬಿನಲ್ಲಿರುವ ಮರದ ದಿಮ್ಮಿಗೆ ಕಬ್ಬಿಣದ ಸಲಾಕೆಯನ್ನು ಅಳವಡಿಸಿರುವುದು.



ತುರುವೇಕೆರೆ ಕೆರೆ ಕೋಡಿಗೆ ಹೊಂದಿಕೊಂಡಿರುವಂತೆ ನಿರ್ಮಿಸಿರುವ ಕಾಲುವೆ



ಮಾಯಸಂದ್ರದ ಕೆರೆ ಆಯಕಟ್ಟಿಗೆ ನೀರುಣಿಸುವ ಕಾಲುವೆ.



ಮಲ್ಲಾಘಟ್ಟ ಕೆರೆಯ ಕಾಲುವೆ.



ಸಾರಿಗೆ ಹಳ್ಳಿ ಕೆರೆಯ ಬಸವಣ್ಣನ ಕಾಲುವೆ.



ಮಾವಿನ ಕೆರೆ ತೂಬಿನ ಅಂತರ್ ಮಾರ್ಗದಲ್ಲಿ ಆಯಕಟ್ಟಿಗೆ ನೀರುಣಿಸುವ ತೊಟ್ಟಿಯ ರಚನೆ.



ಕೊಂಡಜ್ಜಿ ಕೆರೆಯ ಕೋಡಿ.



ವೀರಸಾಗರ ಕೆರೆಯ ಅರ್ಧ ಚಂದ್ರಾಕೃತಿಯ ಕೋಡಿ.



ತುಯಲಹಳ್ಳಿ ಕೆರೆಯ ಕೋಡಿ.



ಮಲ್ಲಾ ಘಟ್ಟ ಕೆರೆ.



ನಾಗಲಾಪುರದ ಚಿಕ್ಕಕೆರೆ.



ನಾಗಲಾಪುರದ ದೊಡ್ಡಕೆರೆ.



ತಂಡಗ ಕೆರೆ.



ರಾಮಸಾಗರ ಕೆರೆ.



ತುಯಲ ಹಳ್ಳಿ ಕೆರೆ.



ಸಂಪಿಗೆ ಕೆರೆ ಸಮೀಪದಲ್ಲಿ ನೆಟ್ಟಿರುವ ಶಾಸನ ಕಲ್ಲು.



ಶಿವ ದೇವಸ್ಥಾನದ ಹತ್ತಿರ ಇರುವ ಶಾಸನ ಕಲ್ಲು , ಜಡೆಯಾ.



ಸೋಮೇಶ್ವರ ದೇವಾಲಯದ ಒಳಗೆ ಇರುವ ಶಾಸನ ಕಲ್ಲು , ಕೊಂಡಜ್ಜಿ.



ಸೂಳೆಕೆರೆ ಆಯಕಟ್ಟಿನ ಪ್ರದೇಶದಲ್ಲಿರುವ ವೀರಗಲ್ಲು.



ರುದ್ರೇಶ್ವರ ದೇವಸ್ಥಾನದ ಒಳಗೆ ಇರುವ ವೀರಗಲ್ಲು ಮತ್ತು ಶಾಸನ , ಸೂಳೆಕೆರೆ.



ಮಾಯಸಂದ್ರ ಕೆರೆ ಏರಿ ಮಧ್ಯದಲ್ಲಿರುವ ಮಾಯಮ್ಮನ ಗುಡಿ.



ನಾಗಲಾಪುರದ ಚಿಕ್ಕಕೆರೆ ಸಮೀಪ ಇರುವ ಕೇದಾರೇಶ್ವರ ದೇವಾಲಯ.



ಕಣತೂರು ಕೆರೆ ಹತ್ತಿರದ ಪುಷ್ಕರಣಿ.



ನೀರಗುಂದ ಕೆರೆ ಹತ್ತಿರದ ಪುಷ್ಕರಣಿ.



ಮಲ್ಲಾಘಟ್ಟಕೆರೆಯ ಆಚರಣೆಗಳು : ಗಂಗಮ್ಮನ ಪೂಜೆ



ಹೋಮ ನಡೆಸುತ್ತಿರುವುದು



ಗಂಗಾಸ್ನಾನಕ್ಕೆ ಅಗಮಿಸಿರುವ ರಂಗನಾಥಸ್ವಾಮಿ, ಕನ್ನುಂಘಟ್ಟ.



ಬಸ್ತಿಹಳ್ಳಿಯಮ್ಮ , ಬಸ್ತಿಹಳ್ಳಿ.

